RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಜುಲೈ ೧೧, ೨೦೧೩ (ಆಷಾಢ ೨೦, ಶಕ ವರ್ಷ ೧೯೩೫)<br>Bangalore, Thursday, July 11, 2013 (Ashadha 20, Shaka Varsha 1935) | ಸಂಚಿಕೆ ೨೮<br>Issue 28 |
|---|---|---|



## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** 2012-13ನೇ ಸಾಲಿಗೆ ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯ ಖಾದಿ ಉತ್ಪನ್ನಗಳ ಚಿಲ್ಲರೆ ಮಾರಾಟದ ಮೇಲಿನ ರಿಯಾಯಿತಿಯ ಲೆಕ್ಕ ಶೀರ್ಷಿಕೆಯಡಿ ಹೆಚ್ಚುವರಿ ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ: ಸಿಐ 31 ಎಸ್‌ಎಲ್‌ವಿ 2012, ದಿನಾಂಕ: 12-06-2012
2) ಸರ್ಕಾರದ ಆದೇಶ ಸಂಖ್ಯೆ: ಸಿಐ 31 ಎಸ್‌ಎಲ್‌ವಿ 2012, ದಿನಾಂಕ: 29-09-2012
3) ಸರ್ಕಾರದ ಆದೇಶ ಸಂಖ್ಯೆ: ಸಿಐ 36 ಎಸ್‌ಎಲ್‌ವಿ 2012, ದಿನಾಂಕ: 25-06-2012
4) ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಪತ್ರ ಸಂಖ್ಯೆ: ಕೈವಾಇ/ವಿಶ್ವ/ಎ2/2013/ಯೋಜನೆ/2012-13, ದಿನಾಂಕ: 07-09-2012
5) ಸರ್ಕಾರದ ಆದೇಶ ಸಂಖ್ಯೆ: ಸಿಐ 36 ಎಸ್‌ಎಲ್‌ವಿ 2012, ದಿನಾಂಕ: 06-03-2013

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1) ಮತ್ತು (2)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯ ಖಾದಿ ಉತ್ಪನ್ನಗಳ ಚಿಲ್ಲರೆ ಮಾರಾಟದ ಮೇಲಿನ ರಿಬೇಟ್ ಬಿಲ್ಲುಗಳು ಹಾಗೂ ಪ್ರೋತ್ಸಾಹ ಮಜೂರಿಗಾಗಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ 2012-13ನೇ ಸಾಲಿನ ಲೆಕ್ಕಶೀರ್ಷಿಕೆ 2851-00-102-0-74-106 (ಯೋಜನೆ) ರಡಿ ಹಂಚಿಕೆಯಾಗಿದ್ದ ರೂ. 800.00 ಲಕ್ಷಗಳ ಪೈಕಿ ಒಟ್ಟು ರೂ. 400.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಭಾರತ ಸರ್ಕಾರವು ಜಾರಿಗೆ ತಂದಿರುವ **ಮಾರುಕಟ್ಟೆ ಅಭಿವೃದ್ಧಿ ಸಹಾಯಧನ** ಯೋಜನೆಯಂತೆ ರಾಜ್ಯ ಸರ್ಕಾರದಲ್ಲಿಯೂ ರಿಬೇಟ್ ಯೋಜನೆಯ ಬದಲಾಗಿ ಮಾರುಕಟ್ಟೆ ಅಭಿವೃದ್ಧಿ ಸಹಾಯಧನ ಯೋಜನೆಯನ್ನು ದಿನಾಂಕ: 01-04-2012ರಿಂದ ಅನ್ವಯವಾಗುವಂತೆ ಜಾರಿಗೆ ತರಲಾಗಿದೆ.

ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು ಖಾದಿ ಉತ್ಪನ್ನಗಳ ಚಿಲ್ಲರೆ ಮಾರಾಟದ ಮೇಲಿನ ರಿಯಾಯಿತಿ ಬಾಬ್ತು ದಿನಾಂಕ: 31-03-2012ರ ಅಂತ್ಯಕ್ಕೆ ಒಟ್ಟು ರೂ. 1271.64 ಲಕ್ಷಗಳು ಇದೆ ಎಂದು ತಿಳಿಸಿ, ಈ ಮೊತ್ತವನ್ನು ಪ್ರಸ್ತುತ ವರ್ಷ ಪೂರ್ಣವಾಗಿ ಬಿಡುಗಡೆ ಮಾಡುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಕ್ರಮಾಂಕ (5)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2012-13ನೇ ಸಾಲಿನ ಲೆಕ್ಕಶೀರ್ಷಿಕೆ 2851-00-102-0-74-106 (ಯೋಜನೆ) ರಡಿ ಉಳಿದಿದ್ದ ರೂ. 4.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಇದರಿಂದ ಖಾದಿ ಮಂಡಳಿಗೆ ಬಿಡುಗಡೆ ಮಾಡಬೇಕಾದ ರಿಬೇಟ್ ಬಾಬ್ತು ರೂ. 1,271.64 ಲಕ್ಷಗಳನ್ನು ಇನ್ನೂ ರೂ. 471.64 ಲಕ್ಷ ಬಾಕಿ ಉಳಿಯುತ್ತದೆ.

ಕೈಗಾರಿಕಾಭಿವೃದ್ಧಿ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 36 ಎಸ್‌ಎಲ್‌ವಿ 2012, ಬೆಂಗಳೂರು, ದಿನಾಂಕ: 27ನೇ ಮಾರ್ಚ್, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ ಮತ್ತು ಖಾದಿ ಮತ್ತು ಗ್ರಾಮೋದ್ಯೋಗ ಆಯೋಗದ ರಾಜ್ಯದಲ್ಲಿರುವ ಒಟ್ಟು 155 ಖಾದಿ ಘಟಕಗಳಿಗೆ ದಿನಾಂಕ: 31–03–2012ರ ಅಂತ್ಯಕ್ಕೆ ಬಾಕಿ ಇರುವ ರಿಬೇಟ್ ಬಾಬ್ತು ಬಾಕಿಯನ್ನು ಪೂರ್ಣವಾಗಿ ಪಾವತಿಸಲು 2012–13ನೇ ಸಾಲಿಗೆ ಲೆಕ್ಕಶೀರ್ಷಿಕೆ 2851–00–102–0–74–106 (ಯೋಜನೆ) ರಡಿ ರೂ. 471.64 ಲಕ್ಷಗಳನ್ನು (ನಾಲ್ಕು ನೂರ ಎಪ್ಪತ್ತೊಂದು ಲಕ್ಷಗಳು ಮತ್ತು ಅರವತ್ತು ನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಹೆಚ್ಚುವರಿ ಅನುದಾನವಾಗಿ ಬಿಡುಗಡೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಹಣ ಸ್ವೀಕೃತಿ ರಶೀತಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಮೇಲುಸಹಿಯೊಂದಿಗೆ ಖಜಾನೆಯಿಂದ ಹಣ ಪಡೆಯಲು ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

**ಷರತ್ತುಗಳು:**

1) ಸದರಿ ಅನುದಾನವನ್ನು ಬೇರೆ ಇನ್ನಾವುದೇ ಉದ್ದೇಶಕ್ಕೆ ಬಳಸಿಕೊಳ್ಳದೇ ಯಾವ ಉದ್ದೇಶಕ್ಕಾಗಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಮಾತ್ರ ಬಳಸತಕ್ಕದ್ದು.

2) ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರು ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯು ಅನುದಾನವನ್ನು ಸದ್ಬಳಕೆ ಮಾಡುತ್ತಿದೆಯೇ ಎಂಬ ಬಗ್ಗೆ ಮಂಡಳಿಯ ಕಾರ್ಯಕ್ಷಮತೆಯನ್ನು ಖಚಿತಪಡಿಸಿಕೊಂಡು ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

3) ಬಿಡುಗಡೆಯಾದ ಸದರಿ ಹಣವನ್ನು ಉಪಯೋಗಿಸಿರುವುದಕ್ಕಾಗಿ ಉಪಯುಕ್ತತಾ ಪ್ರಮಾಣ ಪತ್ರಗಳನ್ನು [Utilization Certificate] ಕಾಲಕಾಲಕ್ಕೆ ಸರ್ಕಾರಕ್ಕೆ ಸಲ್ಲಿಸಬೇಕೆಂಬ ನಿಬಂಧನೆಗೆ ಅನುಗುಣವಾಗಿ ಕ್ರಮ ವಹಿಸತಕ್ಕದ್ದು. ಬಾಕಿ ಇರುವ ರಿಬೇಟ್ ಮತ್ತು ಪ್ರೋತ್ಸಾಹ ಮಜೂರಿಯನ್ನು ಖಾದಿ ಸಂಸ್ಥೆಗಳಿಗೆ **ಅವು ಕಾರ್ಯನಿರ್ವಹಿಸುತ್ತಿರುವ ಬಗ್ಗೆ ಖಚಿತ ಪಡಿಸಿಕೊಂಡು ಜೇಷ್ಠತೆ ಆಧಾರದ ಮೇಲೆ ಒಂದು ತಿಂಗಳ ಒಳಗಾಗಿ ಬಿಡುಗಡೆ ಮಾಡಿ,** ಫಲಾನುಭವಿಗಳ ಯಾದಿ ಹಾಗೂ ವಿವರಗಳೊಡನೆ ಅರ್ಹ ಫಲಾನುಭವಿ ಖಾದಿ ಸಂಸ್ಥೆಗಳು ಸರಿಯಾಗಿ ಕಾರ್ಯನಿರ್ವಹಿಸುತ್ತಿವೆಯೇ, ಹಾಗೂ ಸರ್ಕಾರದ ಅನುದಾನ ಸದ್ಬಳಕೆ ಆಗುತ್ತಿದೆಯೇ ಎಂಬುದನ್ನು ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರು ಖಚಿತಪಡಿಸಿಕೊಂಡು, ಅವುಗಳ ದೃಢೀಕರಣಗಳೊಡನೆ ಹಾಗೂ ವಿವರಗಳೊಡನೆ ವರದಿಯನ್ನು **ತಪ್ಪದೇ** ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD **369** Exp-1/13, ದಿನಾಂಕ: 23–03–2013ರ ಸಹಮತಿಯ ಮೇರೆಗೆ ಹಾಗೂ ಸರ್ಕಾರದ ಆದೇಶ ಸಂಖ್ಯೆ: **ಎಫ್‌ಡಿ 04 ಟಿಎಫ್‌ಪಿ 2012,** ದಿನಾಂಕ: 27–04–2012ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಮುಂದುವರೆದು, ಕರ್ನಾಟಕ ರಾಜ್ಯದ ಮುಖ್ಯ ಚುನಾವಣಾಧಿಕಾರಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಚುನಾವಣೆಗಳು) ಇವರು ದಿನಾಂಕ: 27–03–2013ರಂದು ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಲ್.ಎಸ್. ಶ್ರೀಕಂಠಬಾಬು,**
ಸರ್ಕಾರದ ಅಧೀನ ಕಾರ್ಯದರ್ಶಿ [ಸಪ್ರಕೈ],
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

P.R. 640

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ ಆದೇಶ**

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 05 ಎಸ್‌ಎಸ್‌ಟಿ 2013, ಬೆಂಗಳೂರು, ದಿನಾಂಕ: 17ನೇ ಮೇ, 2013.**

**ವಿಷಯ :** ಗೌರವಾನ್ವಿತ ಉಚ್ಚ ನ್ಯಾಯಾಲಯದ ನ್ಯಾಯಾಧೀಶರು ಹಾಗೂ ಸಿಬ್ಬಂದಿಗಳಿಗೆ ಸಂಭಾವನೆಯನ್ನು ನೀಡುವ ಬಗ್ಗೆ

**ಓದಲಾಗಿದೆ :** ದಿನಾಂಕ 08–03–2013ರ ಸಮ ಸಂಖ್ಯೆಯ ಸರ್ಕಾರಿ ಆದೇಶ

ಮೇಲೆ ಓದಲಾದ ಆದೇಶದಲ್ಲಿ "ಕ್ರಮ ಸಂಖ್ಯೆ: 3 ಲೆಕ್ಕ ಶೀರ್ಷಿಕೆ "2052-Secretariat-General Services-090-Secretariat-I-09-Expenditure connected with Committees, Conferences and Tribunals etc., (Non-Plan)" ರ ಬದಲಾಗಿ **ಲೆಕ್ಕಶೀರ್ಷಿಕೆ 2052 Sectt. General Services, 090 Sectt. 01 KGS 051 General Expenses**"ರ ಅಡಿಯಲ್ಲಿ ಭರಿಸತಕ್ಕದ್ದೆಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪ್ರಕಾಶ ವೈ.ಕೆ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು & ಸುವ್ಯವಸ್ಥೆ)

P.R. 648
SC - 25

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಎಸ್.ಎಲ್. ರಾಜೇಂದ್ರ ಪ್ರಸಾದ್, ಅಬಕಾರಿ ಉಪ ಆಯುಕ್ತರು ಇವರ ವಿರುದ್ಧದ ಇಲಾಖಾ ವಿಚಾರಣೆ–ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಆಇ 141 ಇಪಿಎಸ್ 2009, ದಿನಾಂಕ : 16–12–2010.
2. ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು–4, ಕರ್ನಾಟಕ ಲೋಕಾಯುಕ್ತ ಇವರ ವಿಚಾರಣಾ ವರದಿ ಸಂ. ಲೋಕ್/ಎಆರ್ಇ–4/14–ಎ/ಇಎನ್‌ಕ್ಯೂ–80/2011, ದಿನಾಂಕ : 28–11–2012.
3. ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ. ಲೋಕ್/ಎಆರ್ಇ–4/ಇಎನ್‌ಕ್ಯೂ–80/2011, ದಿನಾಂಕ : 21–02–2013.

**ಪ್ರಸ್ತಾವನೆ :**

ಅಬಕಾರಿ ಉಪ ಆಯುಕ್ತರು, ಧಾರವಾಡ ಈ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ 1985 ರಿಂದ ಅಸ್ತಿತ್ವದಲ್ಲಿದ್ದ ಮೆ: ವೆಂಕಟೇಶ್ವರ ಎಂಟರ್‌ಪ್ರೈಸಸ್ ಎಂಬ ಹೆಸರಿನ ಸಂಸ್ಥೆಯ ಸಿಎಲ್–9 ಸನ್ನದನ್ನು ಅದೇ ಹೆಸರಿನಲ್ಲಿ 2006ರಲ್ಲಿ ನೋಂದಣಿ ಆದ ಸಂಸ್ಥೆಯ ಹೆಸರಿಗೆ ಅಕ್ರಮವಾಗಿ ವರ್ಗಾಯಿಸುವ ಮೂಲಕ ದುರ್ನಡತೆ ಎಸಗಿದ ಆರೋಪಕ್ಕಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ : 16–12–2010ರ ಸರ್ಕಾರಿ ಆದೇಶದಲ್ಲಿ ಎಸ್.ಎಲ್. ರಾಜೇಂದ್ರ ಪ್ರಸಾದ್, ಅಬಕಾರಿ ಉಪ ಆಯುಕ್ತರು ಅವರ ವಿರುದ್ಧ ಪೂರ್ಣಪ್ರಮಾಣದ ಇಲಾಖಾ ವಿಚಾರಣೆಯನ್ನು ಸಿಸಿಎ ನಿಯಮ 14–ಎರನ್ವಯ ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸಲಾಯಿತು. ಅವರಿಂದ ವಿಚಾರಣಾಧಿಕಾರಿಗಳಾಗಿ ನೇಮಕಗೊಂಡ ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು–4 ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ : 28–11–2012ರ ವಿಚಾರಣಾ ವರದಿ ಸಲ್ಲಿಸಿ ಆರೋಪ ಸಾಬೀತಾಗಿಲ್ಲವೆಂಬ ನಿರ್ಣಯ ನೀಡಿದರು. ಈ ವರದಿಯನ್ನು ಪರಾಮರ್ಶಿಸಿದ ಸನ್ಮಾನ್ಯ ಲೋಕಾಯುಕ್ತರು ಮೇಲೆ (3) ರಲ್ಲಿ ಓದಲಾದ ದಿನಾಂಕ : 19–12–2013ರ ಪತ್ರದಲ್ಲಿ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಆರೋಪಿಯನ್ನು ಆರೋಪಮುಕ್ತರನ್ನಾಗಿಸಲು ಶಿಫಾರಸ್ಸು ಮಾಡಿದ್ದಾರೆ.

ಸರ್ಕಾರವು, ಮಾನ್ಯ ಲೋಕಾಯುಕ್ತರ ಶಿಫಾರಸ್ಸು ಮತ್ತು ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ. ಎಫ್‌ಡಿ 141 ಇಪಿಎಸ್ 2009, ಬೆಂಗಳೂರು, ದಿನಾಂಕ : 04–04–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರವು, ಶ್ರೀ ಎಸ್.ಎಲ್. ರಾಜೇಂದ್ರ ಪ್ರಸಾದ್, ಅಬಕಾರಿ ಉಪ ಆಯುಕ್ತರು ಇವರನ್ನು ಈ ಪ್ರಕರಣದ ಆರೋಪಗಳಿಂದ ಮುಕ್ತರನ್ನಾಗಿಸುತ್ತದೆ. ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎನ್. ಬಾನೊಳ್ಳಿ,**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರ್ಥಿಕ ಇಲಾಖೆ (ಅಬಕಾರಿ).

**P.R. 605**

## ಸಹಕಾರ ಸಚಿವಾಲಯ

**ವಿಷಯ :** 2012–13ನೇ ಸಾಲಿನ ಆಯವ್ಯಯದಲ್ಲಿ ಸಹಕಾರ ಇಲಾಖೆಯ ಹೊಸ ಯೋಜನೆಗಳಲ್ಲಿ "ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣಾ ಸಹಕಾರ ಸಂಘಗಳಿಗೆ ಬಂಡವಾಳ ನೆರವು ಯೋಜನೆ" ಯಲ್ಲಿ ಷೇರು ಬಂಡವಾಳ ರೂಪದಲ್ಲಿ ಧನಸಹಾಯ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**

1. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಆರ್‌ಸಿಎಸ್/ಬಳಕೆ/ಎಂಡಬ್ಲ್ಯೂಎಸ್/2012–13, ದಿನಾಂಕ : 26–12–2012 ಮತ್ತು 06–03–2013.
2. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ/09/ವೆಚ್ಚ–2/2013, ದಿನಾಂಕ : 21–02–2013.

**ಪ್ರಸ್ತಾವನೆ :**

2012–13ನೇ ಸಾಲಿನ ಆಯವ್ಯಯದಲ್ಲಿ ಸಹಕಾರ ಇಲಾಖೆಯ ಹೊಸ ಯೋಜನೆಗಳಲ್ಲಿ "ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣಾ ಸಹಕಾರ ಸಂಘಗಳಿಗೆ ಬಂಡವಾಳ ನೆರವು ಯೋಜನೆ" ಯಲ್ಲಿ ಷೇರು ಬಂಡವಾಳ ರೂಪದಲ್ಲಿ ಧನಸಹಾಯ ಮಂಜೂರು ಮಾಡಲು ಓದಲಾದ (1)ರ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರು ಕೋರಿರುತ್ತಾರೆ.

ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 09 ವೆಚ್ಚ–2/2013, ದಿನಾಂಕ : 21–02–2013ರಲ್ಲಿ 2012–13ನೇ ಸಾಲಿನಲ್ಲಿ ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣಾ ಸಹಕಾರ ಸಂಘಗಳಿಗೆ ಬಂಡವಾಳ ನೆರವು ಎಂಬ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲು ಸಲ್ಲಿಸಿರುವ ಪ್ರಸ್ತಾವವನ್ನು ಒಪ್ಪಿರುತ್ತದೆ.

ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ), ಸಹಕಾರ ಸಂಘಗಳ ನಿಬಂಧಕರ ಕಛೇರಿ ಇವರು ಅವರ ದಿನಾಂಕ : 06-03-02013ರ ಪ್ರಸ್ತಾವದಲ್ಲಿ ಆರ್ಥಿಕವಾಗಿ ದುರ್ಬಲವಾಗಿರುವ ಸಹಕಾರ ಸಂಘಗಳಿಗೆ ಬಂಡವಾಳ ನೆರವು ನೀಡುವ ಯೋಜನೆಯಲ್ಲಿ ಷೇರು ಬಂಡವಾಳ ರೂಪದಲ್ಲಿ ಐದು ಅರ್ಹ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘಗಳಿಗೆ ರೂ. 40.00 ಲಕ್ಷಗಳ ಷೇರು ಬಂಡವಾಳವನ್ನು ಮಂಜೂರು ಮಾಡಲು ಕೋರಿರುತ್ತಾರೆ. ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಅವರ ಪ್ರಸ್ತಾವದಲ್ಲಿ ಸರ್ಕಾರದ ದಿನಾಂಕ : 28-02-2013ರ ಆದೇಶದ ಷರತ್ತುಗಳಿಗನುಗುಣವಾಗಿ ಐದು ಅರ್ಹ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘಗಳನ್ನು ಆಯ್ಕೆ ಮಾಡಲಾಗಿದ್ದು, ಅದರಂತೆ ಈ ಕೆಳಗೆ ನಮೂದಿಸಿರುವಂತೆ ಷೇರು ಬಂಡವಾಳ ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

**(ರೂ. ಲಕ್ಷಗಳಲ್ಲಿ)**

| ಕ್ರ. ಸಂ. | ಸಂಘಗಳ ಹೆಸರು | ಷೇರು ಬಂಡವಾಳ |
|---|---|---|
| 01. | ಚಿತ್ತಾಪುರ ಟಿಎಪಿಸಿಎಂಎಸ್, ಗುಲ್ಬರ್ಗಾ ಜಿಲ್ಲೆ | 10.00 |
| 02. | ಆಳಂದ ಟಿಎಪಿಸಿಎಂಎಸ್, ಗುಲ್ಬರ್ಗಾ ಜಿಲ್ಲೆ | 10.00 |
| 03. | ಹುಮನಾಬಾದ್ ಟಿಎಪಿಸಿಎಂಎಸ್, ಬೀದರ್ ಜಿಲ್ಲೆ | 10.00 |
| 04. | ಸಕಲೇಶಪುರ ಟಿಎಪಿಸಿಎಂಎಸ್, ಹಾಸನ ಜಿಲ್ಲೆ | 5.00 |
| 05. | ಕುಂದಾಪುರ ಟಿಎಪಿಸಿಎಂಎಸ್, ಉಡುಪಿ ಜಿಲ್ಲೆ | 5.00 |
| | **ಒಟ್ಟು** | **ರೂ. 40.00 ಲಕ್ಷ** |

ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 43 ಸಂಮಾಸ 2012, ಬೆಂಗಳೂರು, ದಿನಾಂಕ : 13-03-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2012-13ನೇ ಸಾಲಿನ ಆಯವ್ಯಯದಲ್ಲಿ ಸಹಕಾರ ಇಲಾಖೆಯ ಹೊಸ ಯೋಜನೆಗಳಲ್ಲಿ **"ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣಾ ಸಹಕಾರ ಸಂಘಗಳಿಗೆ ಬಂಡವಾಳ ನೆರವು ಯೋಜನೆ"** ಯಲ್ಲಿ ಪ್ರಸ್ತಾವದಲ್ಲಿ ನಮೂದಿಸಿರುವ ಐದು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘಗಳಿಗೆ ಪ್ರತಿ ಸಂಘದ ಮುಂದೆ ನಮೂದಿಸಿರುವಂತೆ ಒಟ್ಟು ರೂ. 40.00 ಲಕ್ಷ (ನಲವತ್ತು ಲಕ್ಷ ರೂಪಾಯಿಗಳು ಮಾತ್ರ) ಷೇರು ಬಂಡವಾಳವನ್ನು ಸರ್ಕಾರದ ದಿನಾಂಕ : 28-02-2013ರ ಆದೇಶದ ಷರತ್ತಗಳಿಗೊಳಪಟ್ಟು ಮಂಜೂರು ಮಾಡಿದೆ.

ಈ ವೆಚ್ಚವನ್ನು 2012-13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4425-00-108-0-57 ಆರ್ಥಿಕವಾಗಿ ದುರ್ಬಲವಾಗಿರುವ ಮಾರಾಟ, ಗ್ರಾಹಕರ ಮತ್ತು ಸಂಸ್ಕರಣಾ ಸಹಕಾರ ಸಂಘಗಳಿಗೆ ಬಂಡವಾಳ ನೆರವು ಯೋಜನೆಯಲ್ಲಿ ಭರಿಸತಕ್ಕದ್ದು.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿಯಮಿತ, ಬೆಂಗಳೂರು ಇಲ್ಲಿ ಠೇವಣಿಸತಕ್ಕದ್ದು. ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಪಟ್ಟ ಸಂಸ್ಥೆಗಳಿಗೆ ಬಿಡುಗಡೆ ಮಾಡಿ ಉಪಯೋಗ ಪ್ರಮಾಣ ಪತ್ರಗಳನ್ನು ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ : 12-03-2013ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಎಸ್. ರಮಣರೆಡ್ಡಿ,**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ.

**P.R. 607**

## ಸಹಕಾರ ಸಚಿವಾಲಯ

**ವಿಷಯ :** ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು, ಇವರ ಕಛೇರಿಯ ದಾವಾ ಸಂ : ಎ(ಎಚ್ & ಎಂ) ಡಿಐಎಸ್/ಡಿ-2/2132/2000-01, ಅನ್ನು ಇತ್ಯರ್ಥಕ್ಕಾಗಿ ಸಹಕಾರ ಸಂಘಗಳ ನಿಬಂಧಕರ ನ್ಯಾಯಾಲಯಕ್ಕೆ ವಹಿಸುವ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಅಪರ ನಿಬಂಧಕರು, (ಗೃಹ ಮತ್ತು ಇತರೆ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರ ಕಛೇರಿ ಆದೇಶ ಸಂಖ್ಯೆ : ಎ(ಎಚ್ & ಎಂ) ಡಿಐಎಸ್/ಡಿ-2/2132/2000-01, ದಿನಾಂಕ: 30-06-2012.

**ಪ್ರಸ್ತಾವನೆ :**

ಮೈಸೂರು ಜಿಲ್ಲಾ ಮಹಿಳಾ ಮೀನು ಉತ್ಪಾದಕರ ಹಾಗೂ ಮಾರಾಟಗಾರರ ಸಹಕಾರ ಸಂಘ ನಿಯಮಿತ, ಮೈಸೂರು ಇವರು, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರಿ ಮೀನುಗಾರಿಕೆ ಮಹಾಮಂಡಳ ನಿಯಮಿತ, ಮೈಸೂರು ಹಾಗೂ ಇತರ ಆರು ಜನರ ವಿರುದ್ಧ ಸಹಕಾರ ಸಂಘಗಳ ಅಪರ ನಿಬಂಧಕರು (ಗೃಹ ಮತ್ತು ಇತರೆ)ರವರ ನ್ಯಾಯಾಲಯದಲ್ಲಿ ದಾಖಲಿಸಿದ್ದ ಮೇಲ್ಕಂಡ ದಾವೆಯಲ್ಲಿ ಸಹಕಾರ ಸಂಘಗಳ ಅಪರ

ನಿಬಂಧಕರು, (ಗೃಹ ಮತ್ತು ಇತರೆ)ರವರ 7ನೇ ಪ್ರತಿವಾದಿಯಾಗಿರುವುದರಿಂದ ಸದರಿ ದಾವೆಯನ್ನು ಇತ್ಯರ್ಥಕ್ಕಾಗಿ ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರ ನ್ಯಾಯಾಲಯಕ್ಕೆ ವಹಿಸಿ ಮೇಲೆ ಓದಲಾದ ಆದೇಶದಲ್ಲಿ ಆದೇಶಿಸಿರುತ್ತಾರೆ.

ಸಹಕಾರ ಸಂಘಗಳ ಅಪರ ನಿಬಂಧಕರು (ಗೃಹ ಮತ್ತು ಇತರೆ) ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರೀರ್ವರೂ ಒಂದೇ ಶ್ರೇಣಿಯ ಅಧಿಕಾರಿಗಳಾಗಿದ್ದು. ಮೇಲ್ಕಂಡ ದಾವೆಯಲ್ಲಿ ಸಮರ್ಥ ನ್ಯಾಯಾ ದಾವದ ದೃಷ್ಠಿಯಿಂದ ಇತ್ಯರ್ಥಕ್ಕಾಗಿ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ನ್ಯಾಯಾಲಯಕ್ಕೆ ವಹಿಸುವುದು ಸೂಕ್ತವೆಂದು ಭಾವಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 07 ಸಿಎಪಿ 2013, ಬೆಂಗಳೂರು, ದಿನಾಂಕ : 23-03-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 2ಎ (4) ರಡಿಯಲ್ಲಿ ಸರ್ಕಾರಕ್ಕೆ ದತ್ತವಾಗಿರುವ ಅಧಿಕಾರದನ್ವಯ ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ಇತ್ಯರ್ಥಕ್ಕಾಗಿ ಬಾಕಿ ಇರುವ ದಾವಾ ಸಂಖ್ಯೆ : ಎ(ಎಚ್ & ಎಂ) ಡಿಐಎಸ್/ ಡಿ-2/2132/2000-0001 ಅನ್ನು ಇತ್ಯರ್ಥಕ್ಕಾಗಿ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ನ್ಯಾಯಾಲಯಕ್ಕೆ ವಹಿಸಿ ಆದೇಶಿಸಲಾಗಿದೆ. ಪ್ರಸ್ತುತ ದಾವೆಯನ್ನು ಒಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಮೇಲ್ಕಂಡ ಆದೇಶ ಹೊರಡಿಸಲಾಗಿದ್ದು, ಈ ದಾವೆಯು ಇತ್ಯರ್ಥವಾದ ನಂತರ, ದಾವೆಗಳ ವಿಲೇವಾರಿ ಸಂಬಂಧವಾಗಿ ಅಧಿಕಾರ ಪ್ರತ್ಯಾಯೋಜನೆಯು ಯಥಾಸ್ಥಿತಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಎಸ್. ರಮಣರೆಡ್ಡಿ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**P.R. 608**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ಬಿಪಿಎಲ್ ಮತ್ತು ಎಎವೈ ಪಡಿತರ ಚೀಟಿಗಳಿಗೆ ವಿತರಿಸುವ ಅಕ್ಕಿ ದರವನ್ನು ರೂ. 3.00 ರಿಂದ ರೂ. 2.00 ಕ್ಕೆ ಇಳಿಸಿರುವ ಬಗ್ಗೆ ಹಾಗೂ ಇದಕ್ಕೆ ಸಂಬಂಧಿಸಿದ ದರ ಪರಿಷ್ಕರಣೆಯನ್ನು ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಆನಾಸ 43 ಡಿಆರ್ಎ 2013, ದಿನಾಂಕ : 18-3-2013.

2. ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ : ಸಿಎಫ್ಎಸ್/ಪಿಡಿ/III/60/2010-11, ದಿನಾಂಕ : 18-3-2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ 2013-14ನೇ ಸಾಲಿನಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಿಗೆ ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ನೀಡುವ ಬಿಪಿಎಲ್ ಮತ್ತು ಎಎವೈ ಪಡಿತರ ಚೀಟಿದಾರರಿಗೆ ಅಕ್ಕಿಯ ದರವನ್ನು ಪ್ರತಿ ಕೆ.ಜಿಗೆ ರೂ. 3.00 ರಿಂದ ರೂ. 2.00 ಕ್ಕೆ ಇಳಿಸಿ, ಮಾರ್ಚ್ 2013 ರಿಂದ ಜಾರಿಗೆ ಬರುವಂತೆ ಆದೇಶ ಹೊರಡಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಆಯುಕ್ತರು ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ಬಿಪಿಎಲ್ ಮತ್ತು ಎಎವೈ ಪಡಿತರ ಚೀಟಿಗಳಿಗೆ ವಿತರಿಸುವ ಅಕ್ಕಿ ದರವನ್ನು ಪ್ರತಿ ಕೆ.ಜಿ.ಗೆ ರೂ. 3.00 ರಿಂದ ರೂ. 2.00ಕ್ಕೆ ಇಳಿಸಿರುವ ಹಿನ್ನೆಲೆಯಲ್ಲಿ ದರ ಪಟ್ಟಿಯನ್ನು ಪರಿಷ್ಕರಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಅಕ್ಕಿಯ ದರವನ್ನು ಈ ಕೆಳಕಂಡಂತೆ ನಿಗಧಿಪಡಿಸಿ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆನಾಸ 43 ಡಿಆರ್ಎ 2013, ಬೆಂಗಳೂರು, ದಿನಾಂಕ : 23-03-2013**

**(ದರ ರೂ.ಗಳಲ್ಲಿ/ಪ್ರತಿ ಕ್ವಿಂಟಾಲ್‌ಗೆ)**

| ಕ್ರ ಸಂ. | ವಿವರ | ಬಿಪಿಎಲ್ | ಇಬಿಪಿಎಲ್ | ಎಎವೈ |
|---|---|---|---|---|
| | | ಅಕ್ಕಿ | ಅಕ್ಕಿ | ಅಕ್ಕಿ |
| 1. | ಕೇಂದ್ರಿಯ ವಿತರಣಾ ದರ | 565.00 | 830.00 | 300.00 |
| 2. | ರಾಜ್ಯ ಸಹಾಯಧನ | 416.00 | 681.00 | 150.00 |
| 3. | ಸಗಟು ಲಾಭಾಂಶ | 20.00 | 20.00 | 19.00 |
| 4. | ಸಗಟು ವಿತರಣಾ ದರ | 169.00 | 169.00 | 169.00 |
| 5. | ಚಿಲ್ಲರೆ ಲಾಭಾಂಶ | 31.00 | 31.00 | 31.00 |

| ಕ್ರ. ಸಂ. | ವಿವರ | ಬಿಪಿಎಲ್ | ಇಬಿಪಿಎಲ್ | ಎಎವೈ |
|---|---|---|---|---|
| | | ಅಕ್ಕಿ | ಅಕ್ಕಿ | ಅಕ್ಕಿ |
| 6. | ಚಿಲ್ಲರೆ ವಿತರಣಾ ದರ | 200.00 | 200.00 | 200.00 |
| 7. | ರಾಜ್ಯ ವಿತರಣಾ ಪ್ರಮಾಣ (ಕೆಜಿ.ಗಳಲ್ಲಿ) | ಪ್ರತಿ ಯೂನಿಟ್‌ಗೆ ಅಕ್ಕಿ 4 ಕೆ.ಜಿ. ಗರಿಷ್ಟ 20 ಕೆ.ಜಿ. | | 29 ಕೆ.ಜಿ. ಪ್ರತಿ ಕಾರ್ಡಿಗೆ |

ಇದಕ್ಕೆ ತಗಲುವ ಹೆಚ್ಚುವರಿ ಸಹಾಯಧನ ಮೊತ್ತವನ್ನು ಲೆಕ್ಕ ಶೀರ್ಷಿಕೆ 2408-01-102-0-01-106ರಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ.

P.R. 609
SC - 200

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಶ್ರೀ ರವಿಸುಬ್ರಮಣ್ಯಂ, ಶಾಸಕರು, ಬಸವನಗುಡಿ ವಿಧಾನ ಸಭಾ ಕ್ಷೇತ್ರ, ಬೆಂಗಳೂರು ಇವರನ್ನು ವನ್ಯಜೀವಿ (ಸಂರಕ್ಷಣಾ) ಕಾಯ್ದೆ, 1972ರ ಸೆಕ್ಷನ್ 4(1) (ಬಿಬಿ) ರ ಪ್ರಕಾರ ಕರ್ನಾಟಕದಲ್ಲಿ ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ಎರಡು ವರ್ಷಗಳ ಅವಧಿಗೆ ನೇಮಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಅಪಜೀ 22 ಎಫ್‌ಡಬ್ಲ್ಯೂಎಲ್ 2012, ಬೆಂಗಳೂರು, ದಿನಾಂಕ : 23-02-2012.
2. ಸರ್ಕಾರದ ಆದೇಶ ಸಂಖ್ಯೆ : ಅಪಜೀ 24 ಎಫ್‌ಡಬ್ಲ್ಯೂಎಲ್ 2012, ಬೆಂಗಳೂರು, ದಿನಾಂಕ : 20-03-2012.

**ಪ್ರಸ್ತಾವನೆ :**

1. ಮೇಲೆ (1) ರಲ್ಲಿ ಓದಲಾದ ದಿನಾಂಕ : 23-02-2012ರ ಸರ್ಕಾರದ ಆದೇಶದಲ್ಲಿ ಶ್ರೀ ಜಿ. ಮಲ್ಲೇಶಪ್ಪ, ಸ್ವಾಮಿ ವಿವೇಕಾನಂದ ಸೇವಾ ಟ್ರಸ್ಟ್ (ರಿ), ಬಿಳಿಗಿರಿರಂಗನ ಬೆಟ್ಟ, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ ಇವರನ್ನು ಚಾಮರಾಜನಗರ ಜಿಲ್ಲೆಗೆ ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ಆದೇಶ ಹೊರಡಿಸಿದ ದಿನಾಂಕದಿಂದ ಅನ್ವಯವಾಗುವಂತೆ ಎರಡು ವರ್ಷಗಳ ಅವಧಿಗೆ ನೇಮಕ ಮಾಡಲಾಗಿದೆ.

2. ಮೇಲೆ (2) ರಲ್ಲಿ ಓದಲಾದ ದಿನಾಂಕ : 20-03-2012 ರ ಸರ್ಕಾರದ ಆದೇಶದಲ್ಲಿ ವನ್ಯಜೀವಿ (ಸಂರಕ್ಷಣಾ) ಕಾಯ್ದೆ, 1972ರ ಸೆಕ್ಷನ್ 4(1) (ಬಿಬಿ)ರ ಪ್ರಕಾರ ಗೌರವ ವನ್ಯಜೀವಿ ಪರಿಪಾಲಕರನ್ನಾಗಿ 32 ಜನರನ್ನು ಎರಡು ವರ್ಷಗಳ ಅವಧಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಅನ್ವಯವಾಗುವಂತೆ ನೇಮಕ ಮಾಡಲಾಗಿದೆ.

3. ಸರ್ಕಾರವು ಈಗ ಶ್ರೀ ರವಿಸುಬ್ರಮಣ್ಯಂ ಇವರನ್ನು ಚಾಮರಾಜನಗರ ಜಿಲ್ಲೆಗೆ ಗೌರವ ವನ್ಯಜೀವಿ ಪರಿಪಲಕರನ್ನಾಗಿ ಎರಡು ವರ್ಷಗಳ ಅವಧಿಗೆ ನೇಮಿಸಲು ಉದ್ದೇಶಿಸಿರುತ್ತದೆ.

4. ಈ ಹಿನ್ನೆಲೆಯಲ್ಲಿ ಕೆಳಗಿನಂತೆ ಆದೇಶ ಹೊರಡಿಸಿದೆ.

### ಸರ್ಕಾರದ ಆದೇಶ ಸಂಖ್ಯೆ : ಅಪಜೀ 32 ಎಫ್‌ಡಬ್ಲ್ಯೂಎಲ್ 2013, ಬೆಂಗಳೂರು, ದಿನಾಂಕ : 18-02-2013

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ, ಸರ್ಕಾರವು ವನ್ಯಜೀವಿ (ಸಂರಕ್ಷಣಾ) ಕಾಯ್ದೆ, 1972ರ ಸೆಕ್ಷನ್ 4(1) (ಬಿಬಿ) ರ ಪ್ರಕಾರ ಶ್ರೀ ರವಿಸುಬ್ರಮಣ್ಯಂ, ಶಾಸಕರು, ಬಸವನಗುಡಿ ವಿಧಾನ ಸಭಾ ಕ್ಷೇತ್ರ, ಬೆಂಗಳೂರು ಇವರನ್ನು ಚಾಮರಾಜನಗರ ಜಿಲ್ಲೆಗೆ ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಈ ಆದೇಶ ಹೊರಡಿಸಿದ ದಿನಾಂಕದಿಂದ ಅನ್ವಯವಾಗುವಂತೆ ನೇಮಕ ಮಾಡಿದೆ.

ಗೌರವ ವನ್ಯಜೀವಿ ಪರಿಪಾಲಕರ ಕರ್ತವ್ಯ ಮತ್ತು ಜವಾಬ್ದಾರಿಗಳು ಈ ಆದೇಶಕ್ಕೆ ಲಗತ್ತಿಸಿರುವ. ಅನುಬಂಧದಲ್ಲಿರುವಂತೆ ಇರುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಪಿ. ಪಾಟೀಲ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ANNEXURE TO GOVERNMENT ORDER NO : FEE 32 FWL 2013, DATED : 18-02-2013**

**DUTIES AND RESPONSIBILITIES OF THE HONORARY WILDLIFE WARDENS :**

The main duty and responsibility of an Honorary Wildlife Warden is to assist whole heartedly the Chief Wildlife Warden for wildlife conservation and protection work especially with regard to the following matters :

i) Help and assist the Chief Wildlife Warden in control of poaching and trade in wild animals and products/articles thereof ;

ii) Help and assist the Chief Wildlife Warden in detection and prosecution of offences under the Wildlife (Protection) Act and the Rules made thereunder ;

iii) Help and assist in preventing damage to the habitat of Wildlife including fire protection ;

iv) Carrying the message of conservation to the people and enlisting public support for nature and wildlife conservation. The effort should be specially directed towards the communities living in or near the declared wildlife reserves ;

v) Any other matter connected with the protection of wildlife which may be entrusted by the Chief Wildlife Warden of the State from time to time ;

vi) Participate in carrying out wildlife census etc., on the specific request/permission of the Chief Wildlife warden.

**POWERS**

In accordance with sub-section (3) of Section 4 of the Wildlife (Protection) Act, 1972, an Honorary Wildlife Warden appointed under sub-section (1) (bb) of section 4 of the said Act shall be subordinate to the Chief Wildlife Warden of the State.

**GENERAL**

(A) No. staff or vehicle support can be provided to Honorary Wildlife Wardens as a matter of course. However, if the circumstances warrant, the departmental staff should provide all possible help and assistance.

(B) It is also appropriate that the actual expenses incurred by an Honorary Wildlife Warden on travel by public transport for carrying out the duties assigned to him should be reimbursed by the State Government. In addition, all actual expenses incurred in the detection of an offence under the Wildlife (Protection) Act, which leads to successful prosecution may be reimbursed after due verification.

(C) The State Government should recognize outstanding work or service rendered by any Honorary Wildlife Warden. Such recognition can be by way of a letter of commendation, or a certificate signed by the Minister in charge of the Department, or the membership of the State Wildlife Board. Cash grants could also be considered in suitable cases.

**S.P. PATIL**
Under Secretary to Government,
Forest, Ecology and Environment Department.

**P.R. 611**
**SC - 100**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ** : 2012-13ನೇ ಸಾಲಿಗೆ ರಾಜ್ಯದಲ್ಲಿರುವ ವಿವಿಧ ನ್ಯಾಯಾವಾದಿಗಳ ಸಂಘಗಳಿಗೆ ಸಹಾಯಾನುದಾನ ಬಿಡುಗಡೆ ಮಾಡುವ ಬಗ್ಗೆ ಆದೇಶ

**ಉಲ್ಲೇಖ** :

1. ಸರ್ಕಾರದ ಆದೇಶ ಸಂಖ್ಯೆ : ಲಾ 32 ಎಲ್‌ಸಿಎಲ್ 1982, ದಿನಾಂಕ : 17/18-03-1983 ಮತ್ತು ತಿದ್ದುಪಡಿ ದಿನಾಂಕ : 30-10-1996ರ ಅಧಿಸೂಚನೆ ಸಂಖ್ಯೆ : ಲಾ 112 ಎಲ್‌ಸಿಎಲ್ 1996.
2. ನಿಯಮಗಳ ತಿದ್ದುಪಡಿ ಅಧಿಸೂಚನೆ ಸಂಖ್ಯೆ : ಲಾ 120 ಎಲ್‌ಸಿಎಲ್ 2007, ದಿನಾಂಕ : 18-02-2008 ಮತ್ತು ಸೇರ್ಪಡೆ ದಿನಾಂಕ : 16-05-2008.

**ಪ್ರಸ್ತಾವನೆ :**

ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆ ಕಾನೂನು ಪುಸ್ತಕ ಮತ್ತು ಪೀಠೋಪಕರಣಗಳನ್ನು ಖರೀದಿಸಲು ದಿ ಕರ್ನಾಟಕ ಗ್ರಾಂಟ್-ಇನ್-ಎಡ್-ಟು-ಬಾರ್ ಅಸೋಸಿಯೇಷನ್ ರೂಲ್ಸ್ 1983ನ್ನು ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ : 17/18-03-1983 ರಲ್ಲಿ ರಚಿಸಲಾಗಿದೆ ಮತ್ತು ಇದಕ್ಕೆ ಹಂತ ಹಂತವಾಗಿ ತಿದ್ದುಪಡಿ ತರಲಾಗಿದ್ದು, ದಿನಾಂಕ : 30-10-1996ರ ಅಧಿಸೂಚನೆಯಲ್ಲಿ ಆಯಾ ಜಿಲ್ಲೆಯ ಪ್ರಧಾನ/ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಿಗೆ ಅಧಿಕಾರ ಪ್ರತ್ಯಾಯೋಜಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಅಧಿಸೂಚನೆ ದಿನಾಂಕ 18-02-2008 ಮತ್ತು ಸೇರ್ಪಡೆ ದಿನಾಂಕ :16-05-2008 ರನ್ವಯ ಸಹಾಯಾನುದಾನದ ಮೊತ್ತವನ್ನು ಹೆಚ್ಚಿಸಿದ ಕರ್ನಾಟಕ ವಕೀಲರ ಸಂಘಗಳಿಗೆ ಸಹಾಯಾನುದಾನ (ತಿದ್ದುಪಡಿ) ನಿಯಮಗಳು 2007 ದಿನಾಂಕ : 18-02-2008 ರಿಂದ ಜಾರಿಗೆ ಬಂದಿದೆ.

14 ಜಿಲ್ಲೆಗಳ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರುಗಳು ಜಿಲ್ಲೆಯ ಹಾಗೂ ಅವರ ಅಧಿಕಾರ ವ್ಯಾಪ್ತಿಯಲ್ಲಿ ಬರುವ ತಾಲ್ಲೂಕು ಸಂಘಗಳ ಪ್ರಸ್ತಾವನೆ ಮತ್ತು 2011-12ರ ಹಣಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸಿರುತ್ತಾರೆ. ಅದನ್ನು ಪರಿಶೀಲಿಸಿ ಲಭ್ಯವಿರುವ ರೂ. 25.00 ಲಕ್ಷಗಳನ್ನು ಸದರಿ ಜಿಲ್ಲೆ ಹಾಗೂ ತಾಲ್ಲೂಕು ವಕೀಲರ ಸಂಘಗಳಿಗೆ ಅನುಬಂಧದಲ್ಲಿ ಕಾಣಿಸಿದಂತೆ ಹಂಚಿಕೆ ಮಾಡಲು ಸರ್ಕಾರವು ನಿರ್ಧರಿಸಿದೆ.

ಅದರಂತೆ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲಾ 210 ಎಲ್‌ಸಿಎಲ್ 2012, ಬೆಂಗಳೂರು, ದಿನಾಂಕ : 26-03-2013**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯದಲ್ಲಿನ ವಕೀಲರ ಸಂಘಗಳಿಗೆ ಸಹಾಯಾನುದಾನ ನಿಯಮಗಳು 1983 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ರಾಜ್ಯದಲ್ಲಿರುವ ಅನುದಾನ ಕೋರಿ ಪ್ರಸ್ತಾವನೆ ಸಲ್ಲಿಸಿರುವ ವಕೀಲರುಗಳ ಸಂಘಗಳಿಗೆ ಈ ಆದೇಶಕ್ಕೆ ಲಗತ್ತಿಸಿರುವ

ಅನುಬಂಧದಲ್ಲಿ ನಮೂದಿಸಿರುವಂತೆ ಹಾಗೂ ಕೆಳಕಂಡಂತೆ ರೂ. 25.00 (ಇಪ್ಪತ್ತೈದು ಲಕ್ಷ ಮಾತ್ರ) ಸಹಾಯಾನುದಾನವನ್ನು 2012–13ನೇ ಸಾಲಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

- ತಾಲ್ಲೂಕು ಮಟ್ಟದ ವಕೀಲರ ಸಂಘ – ರೂ. 20,000/–
- ಜಿಲ್ಲಾ ಮಟ್ಟದ ವಕೀಲರ ಸಂಘ – ರೂ. 35,000/–
- ಬೆಂಗಳೂರು ವಕೀಲರ ಸಂಘ – ರೂ. 1,25,000/–

ಎಲ್ಲಾ ವಿಭಾಗೀಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ವಕೀಲರ ಸಂಘಗಳಿಗೆ ಸಂಬಂಧಪಟ್ಟಂತೆ ಸಕ್ಷಮ ಪ್ರಾಧಿಕಾರಗಳು ಅಂದರೆ ಆಯಾ ಜಿಲ್ಲೆಯ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು/ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರುಗಳು ಈ ಆದೇಶದಲ್ಲಿ ಬಿಡುಗಡೆ ಮಾಡಲಾದ ಸಹಾಯಾನುದಾನವನ್ನು ಆಯಾ ವಕೀಲರ ಸಂಘಗಳಿಂದ ವರದಿಯೊಂದಿಗೆ ಅರ್ಜಿಗಳನ್ನು ಪಡೆದು ಪರಿಶೀಲಿಸಿ ಈ ಕೆಳಗೆ ನಿಗದಿಪಡಿಸಲಾಗಿರುವಂತೆ ಮಂಜೂರು ಮಾಡಬಹುದು ಮತ್ತು ಆರ್ಥಿಕ ಇಲಾಖೆಯು ಆಗಿಂದಾಗ್ಗೆ ಹೊರಡಿಸಿರುವ ಮಾರ್ಗಸೂಚಿಗಳ ಅನ್ವಯ ನಿಗದಿತ ಕಾಲಮಿತಿಯೊಳಗೆ ಸಂಬಂಧಪಟ್ಟ ಖಜಾನೆಗಳಿಗೆ ಬಿಲ್‌ಗಳನ್ನು ಸಲ್ಲಿಸಿ ಹಣ ಪಡೆಯತಕ್ಕದ್ದು.

ಪ್ರಮಾಣ ಪತ್ರವನ್ನು ಸಲ್ಲಿಸದೇ ಇರುವ ವಕೀಲರುಗಳ ಸಂಘಗಳಿಂದ ಉಪಯೋಗಿತ ಪ್ರಮಾಣಪತ್ರ ಪಡೆದು, ಪ್ರಸಕ್ತ ಸಾಲಿನ ಸಹಾಯಾನುದಾನ ಬಿಡುಗಡೆ ಮಾಡುವ ಷರತ್ತಿಗೆ ಈ ಆದೇಶ ಒಳಪಟ್ಟಿದೆ.

ಪ್ರಸಕ್ತ ಆರ್ಥಿಕ ವರ್ಷದ ನಂತರ ಆ ಸಾಲಿನ ಅನುದಾನ ಬಿಡುಗಡೆಗಾಗಿ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗದು. ಆರ್ಥಿಕ ವರ್ಷ ಮುಗಿದ ಕೂಡಲೇ ಈ ಉದ್ದೇಶಕ್ಕಾಗಿ ಸಕ್ಷಮ ಪ್ರಾಧಿಕಾರಿಗಳು ಬಿಡುಗಡೆ ಮಾಡಿದ ಮತ್ತು ಆದ್ಯರ್ಪಣೆ ಮಾಡಿದ ವಿವರಗಳನ್ನು ಸರ್ಕಾರಕ್ಕೆ ತಪ್ಪದೇ ಸಲ್ಲಿಸುವುದು.

ಈ ಸಹಾಯಾನುದಾನವನ್ನು ಅಡ್ವೋಕೇಟ್ ಜನರಲ್‌ರವರ ಮೂಲಕ ಲೆಕ್ಕ ಶೀರ್ಷಿಕೆ 2014–00–114–0–01–059 ಇತರೆ ಖರ್ಚು (ಯೋಜನೇತರ) ಅಡಿಯಲ್ಲಿ ಒದಗಿಸಿರುವ 2012–13ನೇ ಸಾಲಿನ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಕಾನೂನು ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ವನಇ 151 ಆಂಆಬಿ 2013, ದಿನಾಂಕ : 26–03–2013 ರಲ್ಲಿ ನೀಡಲಾಗಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಎಲ್. ಮಡಿವಾಳ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಅನುಬಂಧ

### ಸರ್ಕಾರದ ಆದೇಶ ಸಂಖ್ಯೆ : ಲಾ 210 ಎಲ್‌ಸಿಎಲ್ 2012, ಬೆಂಗಳೂರು, ದಿನಾಂಕ : 26-03-2013

ರಾಜ್ಯದಲ್ಲಿನ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಸಂಘಗಳಿಗೆ 2012–13 ಸಾಲಿಗೆ ಬಿಡುಗಡೆ ಮಾಡಬೇಕಾದ ಅನುದಾನದ ವಿವರಗಳು

| ಕ್ರ. ಸಂ. | ಜಿಲ್ಲೆಗಳ ಹೆಸರು | ವಕೀಲರುಗಳ ಸಂಘಗಳ ಸಂಖ್ಯೆ | | ಬಿಡುಗಡೆಗೊಳಿಸಲಾದ ಮೊತ್ತ ರೂ. ಗಳಲ್ಲಿ |
|---|---|---|---|---|
| | | ಜಿಲ್ಲಾ ಮಟ್ಟದ ವಕೀಲರ ಸಂಘಗಳು | ತಾಲ್ಲೂಕು ಮಟ್ಟದ ವಕೀಲರ ಸಂಘಗಳು | |
| 1 | 2 | 3 | 4 | 5 |
| 1. | ಬೆಂಗಳೂರು ನಗರ ವಕೀಲರ ಸಂಘ | 1 | 1 | 1,45,000–00 |
| 2. | ಚಾಮರಾಜನಗರ | 1 | 3 | 95,000–00 |
| 3. | ಶಿವಮೊಗ್ಗ | 1 | 6 | 1,55,000–00 |
| 4. | ಚಿಕ್ಕಮಗಳೂರು | 1 | 6 | 1,55,000–00 |
| 5. | ದಾವಣಗೆರೆ | 1 | 5 | 1,35,000–00 |
| 6. | ಬೆಳಗಾಂ | 1 | 11 | 2,70,000–00 |
| 7. | ಬಿಜಾಪುರ | 1 | 4 | 1,15,000 |
| 8. | ಬಾಗಲಕೋಟೆ | 1 | 6 | 1,55,000–00 |
| 9. | ಹಾವೇರಿ | 1 | 6 | 1,55,000–00 |
| 10. | ಗದಗ್ | 1 | 4 | 1,15,000–00 |
| 11. | ಬೀದರ್ | 1 | 4 | 1,15,000–00 |
| 12. | ಯಾದಗಿರಿ | 1 | 2 | 75,000–00 |

| ಕ್ರ. ಸಂ. | ಜಿಲ್ಲೆಗಳ ಹೆಸರು | ವಕೀಲರುಗಳ ಸಂಘಗಳ ಸಂಖ್ಯೆ | | ಬಿಡುಗಡೆಗೊಳಿಸಲಾದ ಮೊತ್ತ ರೂ. ಗಳಲ್ಲಿ |
|---|---|---|---|---|
| | | ಜಿಲ್ಲಾ ಮಟ್ಟದ ವಕೀಲರ ಸಂಘಗಳು | ತಾಲ್ಲೂಕು ಮಟ್ಟದ ವಕೀಲರ ಸಂಘಗಳು | |
| 1 | 2 | 3 | 4 | 5 |
| 13. | ಉಡುಪಿ | 1 | 2 | 75,000–00 |
| 14. | ಕೊಡಗು | 1 | 2 | 75,000–00 |
| | ಒಟ್ಟು | 14 | 62 | 18,35,000–00 |

ಜಿ.ಎಲ್. ಮಡಿವಾಳ
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**P.R. 610**
**SC - 25**

## FOREST, ECOLOGY AND ENVIRONMENT SECRETARIAT

**Sub :** Diversion of 0.09 ha. Of land in Sy.No. 88 of Bettakote SF in Bangalore Rural Division for laying of 11 KV, Under Ground Cable from 220/66/11 KV BIAP to Aerospace Industrial Area in favour of the Executive Engineer (Elect), Karnataka Industrial Area Development Board (KIADB), Bangalore.

**Read :** 1) Letter No. A5(4) GFL.CR.24/2012-13, Dated : 10-01-2013 of the Principal Chief Conservator of Forests (Head of Forest Force), Bangalore..

2) Letter No. F.No. 11.9/98-FC dated : 03-01-2005, 21-11-2005, 26-12-2007 and 08-04-2009 Guidelines of Government of India, Ministry of Environment and Forests, New Delhi.

**PREAMBLE :**

Principal Chief Conservator of Forests, Bangalore vide letter read at (1) above had submitted a proposal for diversion of 0.09 ha. Of land in Sy. No. 88 of Bettakote SF in Bangalore Rural Division for laying of 11 KV, Under Ground Cable from 220/66/11 KV BIAP to Aerospace Industrial Area in favour of the Executive Engineer (Elect), Karnataka Industrial Area Development Board (KIADB), Bangalore subject to certain conditions.

The Government of India, Ministry of Environment and Forests, New Delhi vide their guidelines dated : 03-01-2005 read at (2) above conveyed its general approval under Section 2 of the Forest (Conservation) Act, 1980 for diversion of forest land to Government Departments for certain activities not exceeding one ha.

This proposal has been examined in accordance with the general approval of Government of India vide letter dated : 03-01-2005, 21-11-2005, 26-12-2007 and 08-04-2009 and it has been decided to accord approval under Section 2 of the Forest (Conservation) Act,. 1980 for diversion 0.09 ha. of land in Sy. No. 88 of Bettakote SF in Bangalore Rural Division for laying of 11 KV, Under Ground Cable from 220/66/11 KV BIAP to Aerospace Industrial Area in favour of the Executive Engineer (Elect), Karnataka Industrial Area Development Board (KIADB), Bangalore.

The proposal has been examined in detail and hence the order.

### GOVERNMENT ORDER NO. FEE 07 FLL 2013, BANGALORE, DATED : 19-03-2013.

In the circumstances explained in the preamble and in accordance with the general approval of Government of India in the letters dated : 21-11-2005 and 26-12-2007 and 08-04-2009, Government is pleased to accord approval under Section (2) of Forest (Conservation) Act 1980 for diversion of 0.09 ha. of land in Sy. No. 88 of Bettakote SF in Banglaore Rural Division for laying of 11 KV, Under Ground Cable from 220/66/11 KV BIAP to Aerospace Industrial Area in favour of the Executive Engineer (Elect), Karnataka Industrial Area Development Board (KIADB), Bangalore subject to the following conditions :

1. The legal status of forest land shall remain unchanged and it will continue to be Reserved Forest land.
2. The lease tenure is for Twenty (20) years.
3. The Lessee shall pay lease rent as fixed by the Government from time to time.
4. The leased out area should be used for the purpose for which it is granted. In case the land is not used for the stipulated purpose within two years, the area should be forfeited to the Forest Department under Section 82 of Karnataka Forest Act, 1963. The concerned Deputy Conservator of Forest is authorized to take necessary action in this regard.
5. The Karnataka Forest Act, 1963 and Rules, 1969 and other relevant Acts & Rules will be applicable for any violation.
6. The User Agency Should not sub-lease, mortgage and hypothecate the forest area.
7. The opened trench shall be refilled properly after laying the Under Ground Cable and there shall not be any scope for soil erosion through this trench.

8. No tree shall be felled for laying the Under Ground Cable and no damage should be caused to flora.
9. The User Agency shall ensure that there should be no damage to the available wildlife and its habitats.
10. The User Agency shall abide by all the conditions imposed upon by the Government of India, the Government of Karnataka and the Principal Chief Conservator of Forests (Head of Forest Force).

By Order and in the name of the Governor of Karnataka,

**N.Y. SAGAR**

Under Secretary to Government,

Forest, Ecology and Environment Department.

**P.R. 612**
**SC - 100**

## ಒಳಾಡಳಿತ ಸಚಿವಾಲಯ

**ವಿಷಯ** : ರಾಜ್ಯದಲ್ಲಿ ಅನಧಿಕೃತವಾಗಿ ವಾಸಿಸುತ್ತಿರುವ ಬಾಂಗ್ಲಾ ದೇಶಿಯರನ್ನು ಗಡೀಪಾರು ಮಾಡುವ ಸಂಬಂಧ ರಚಿಸಿರುವ **"**Detention Centre**"** ನಲ್ಲಿರುವ ವಿವಿಧ ವೃಂದದ 15 ಹುದ್ದೆಗಳನ್ನು ಪೊಲೀಸ್ ಆಯುಕ್ತರು ಬೆಂಗಳೂರು ನಗರ, ಬೆಂಗಳೂರು ಇವರ ನಿಯಂತ್ರಣಕ್ಕೆ ಒಳಪಡಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 105 ಪಿಓಪಿ 2011, ಬೆಂಗಳೂರು, ದಿನಾಂಕ : 15-09-2012.
2. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ : ಆರ್.ಎಲ್.ಎನ್.(2)11/2010-11, ದಿನಾಂಕ : 16-01-2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ರಾಜ್ಯದಲ್ಲಿ ಅನಧಿಕೃತವಾಗಿ ವಾಸಿಸುತ್ತಿರುವ ಬಾಂಗ್ಲಾ ರಾಷ್ಟ್ರೀಯರನ್ನು ಗಡಿಪಾರು ಮಾಡುವ ಸಂಬಂಧ "Foreigners Detention Centre" ಅನ್ನು ತೆರೆಯಲು ವಿವಿಧ ವೃಂದದ ಈ ಕೆಳಕಂಡ 15 ಹುದ್ದೆಗಳನ್ನು ಮಾತ್ರ ಸೃಜಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

| PI | PSI | WPSI | AHC | CPC (Driver) | WPC | APC | APC | TOTAL |
|---|---|---|---|---|---|---|---|---|
| 01 | 01 | 03 | 01 | 02 | 02 | 04 | 01 | 15 |

ಮೇಲೆ ಓದಲಾದ (2)ರ ಪತ್ರದಲ್ಲಿ Detention Centre ಅನ್ನು ಬೆಂಗಳೂರು ನಗರದಲ್ಲಿ ಅಥವಾ ನಗರದ ಹೊರವಲಯದಲ್ಲಿ ಸ್ಥಾಪಿಸುವುದರಿಂದ ಹಾಗೂ ಸದರಿ ಸ್ಥಳಕ್ಕೆ ಭದ್ರತೆ ಒದಗಿಸುವ ಜವಾಬ್ದಾರಿಯಾಗಿರುವುದರಿಂದ ಸೃಜಿಸಲಾದ 15 ವಿವಿಧ ದರ್ಜೆಯ ಹುದ್ದೆಗಳನ್ನು ಪೊಲೀಸ್ ಆಯುಕ್ತರು ಬೆಂಗಳೂರು ನಗರ ರವರ ನಿಯಂತ್ರಣಕ್ಕೆ ಒಳಪಡಿಸುವಂತೆ ಮಹಾ ನಿರೀಕ್ಷಕರು ಮತ್ತು ಆರಕ್ಷಕ ಮಹಾ ನಿರ್ದೇಶಕರು ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

### ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 36 ಪಿಓಪಿ 2013, ಬೆಂಗಳೂರು, ದಿನಾಂಕ : 25-03-2013

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದಲ್ಲಿ ಅನಧಿಕೃತವಾಗಿ ವಾಸಿಸುತ್ತಿರುವ ಬಾಂಗ್ಲಾ ರಾಷ್ಟ್ರೀಯರನ್ನು ಗಡಿಪಾರು ಮಾಡುವ ಸಂಬಂಧ "Foreigners Detention Centre" ಅನ್ನು ತೆರೆಯಲು ಉಲ್ಲೇಖ (1)ರಲ್ಲಿ ಸೃಜಿಸಿರುವ ವಿವಿಧ ವೃಂದದ ಈ ಕೆಳಕಂಡ 15 ಹುದ್ದೆಗಳನ್ನು ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಬೆಂಗಳೂರು ಇವರ ನಿಯಂತ್ರಣಕ್ಕೆ ಒಳಪಡಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

| PI | PSI | WPSI | AHC | CPC (Driver) | WPC | APC | APC | TOTAL |
|---|---|---|---|---|---|---|---|---|
| 01 | 01 | 03 | 01 | 02 | 02 | 04 | 01 | 15 |

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಟಿಪ್ಪಣಿ ಸಂಖ್ಯೆ : ಒಸಾಇ 8275 ಆಂಆಸ 2013, ದಿನಾಂಕ : 08-03-2013 ರನ್ವಯ ನೀಡಿದ ಸಹಮತಿ ಮೇರೆಗೆ ಹಾಗೂ ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 1996, ದಿನಾಂಕ : 10-07-1996 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ಪುಟ್ಟೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ).

**P.R. 613**
**SC - 50**

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ಹೆಚ್‌ಡಿ : 247 : ಪಿಓಪಿ : 2012, ಬೆಂಗಳೂರು, ದಿನಾಂಕ : 11–02–2013.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಹೆಚ್‌ಡಿ 247 ಪಿಓಪಿ 2012, ದಿನಾಂಕ : 02–01–2013 ರಲ್ಲಿನ ಕಲಂ(3) ರಲ್ಲಿನ ಕ್ರಮ ಸಂಖ್ಯೆ : 3ರಲ್ಲಿ "ಮಜ್ನರಿವಾಡಿ" (Majnariwadi) ಎಂಬುದರ ಬದಲಾಗಿ "ಮಾಂಜರಿವಾಡಿ" (Manjariwadi), ಕ್ರಮ ಸಂಖ್ಯೆ (8)ರಲ್ಲಿ "ಯಡುರ್‌ವಾಡಿ" (Yadurwadi) ಎಂಬುದರ ಬದಲಾಗಿ "ಯಡೂರವಾಡಿ" (Yadurwadi) ಹಾಗೂ ಕ್ರಮ ಸಂಖ್ಯೆ (19) ರಲ್ಲಿ "ನಾಗಾರ್ಜ್" (Nagarj) ಬದಲಾಗಿ "ನಾಗರಾಳ" (Nagarala) ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ಪುಟ್ಟೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ).

P.R. 614

SC - 50

**ಇಂಧನ ಸಚಿವಾಲಯ**

**ವಿಷಯ :** ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಆದೇಶ ಸಂಖ್ಯೆ : ಇಎನ್ 145 ಪಿಎಸ್‌ಆರ್ 2004, ದಿನಾಂಕ : 15–03–2006.
2. ಸರ್ಕಾರದ ಆದೇಶ ಸಂಖ್ಯೆ : ಇಎನ್ 55 ಪಿಎಸ್‌ಆರ್ 2008, ದಿನಾಂಕ : 04–09–2008.
3. ಸರ್ಕಾರದ ಆದೇಶ ಸಂಖ್ಯೆ : ಇಎನ್ 13 ಪಿಎಸ್‌ಆರ್ 2008, ದಿನಾಂಕ : 05–04–2013 ಮತ್ತು 26–04–2013.

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ–1 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ (ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು) ಮುಂದಿನ ಆದೇಶದವರೆಗೆ ದಿನಾಂಕ 01–08–2008 ರಿಂದ ಜಾರಿಗೆ ಬರುವಂತೆ ರೈತರ 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.
3. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2013–14ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ. 5250.00 ಕೋಟಿಗಳನ್ನು ಒದಗಿಸಲಾಗಿದೆ.
4. 2013–14ನೇ ಸಾಲಿನ ಮೇ ಮಾಹೆಗೆ ರೂ. 350.00 ಕೋಟಿಗಳ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರದ ಆದೇಶ ಸಂ. ಇಎನ್ 13 ಪಿಎಸ್‌ಆರ್ 2013, ಬೆಂಗಳೂರು, ದಿನಾಂಕ : 02–05–2013.**

1. ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ರೂ. 350.00 ಕೋಟಿಗಳ (ರೂ. ಮುನ್ನೂರ ಐವತ್ತು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ ("2801–80–101–1–04–106 (ಸಹಾಯಧನ) (ಯೋಜನೇತರ) ಬಾಬ್ತು ಸಹಾಯಧನವನ್ನು ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

**(ರೂ. ಕೋಟಿಗಳಲ್ಲಿ)**

| ವಿದ್ಯುತ್ ಸರಬರಾಜು ಕಂಪನಿಗಳು | 10 ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯಜ್ಯೋತಿ/ ಕುಟೀರ ಜ್ಯೋತಿ ಸ್ಥಾವರಗಳಿಗೆ | 2013–14ರ ಮೇ ಮಾಹೆಗೆ ಬಿಡುಗಡೆ |
|---|---|---|---|
| ಬೆವಿಕಂ | 45.00 | 3.00 | 48.00 |
| ಮವಿಕಂ | 21.00 | 1.00 | 22.00 |
| ಹುವಿಕಂ | 135.00 | 5.00 | 140.00 |

| ವಿದ್ಯುತ್ ಸರಬರಾಜು ಕಂಪನಿಗಳು | 10 ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯಜ್ಯೋತಿ/ ಕುಟೀರ ಜ್ಯೋತಿ ಸ್ಥಾವರಗಳಿಗೆ | 2013–14ರ ಮೇ ಮಾಹೆಗೆ ಬಿಡುಗಡೆ |
|---|---|---|---|
| ಗುವಿಕಂ | 77.00 | 4.00 | 81.00 |
| ಚಾವಿಸನಿನಿ | 53.00 | 2.00 | 55.00 |
| ಹುಕ್ಕೇರಿ | 4.00 | 0.00 | 4.00 |
| **ಒಟ್ಟು** | **335.00** | **15.00** | **350.00** |

(ರೂ. ಕೋಟಿಗಳಲ್ಲಿ)

| ವಿದ್ಯುತ್ ಸರಬರಾಜು ಕಂಪನಿಗಳು | ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ನೇರ ಬಿಡುಗಡೆ | ವಿದ್ಯುತ್ ಸರಬರಾಜು ಕಂಪನಿಗಳಿಗೆ ನೇರ ಬಿಡುಗಡೆ | ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ನೇರ ಬಿಡುಗಡೆ (GUVNL) | ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ನೇರ ಬಿಡುಗಡೆ (JSWPTC) | ಒಟ್ಟು ಮೊತ್ತ |
|---|---|---|---|---|---|
| ಬೆವಿಕಂ | 48.00 | 0.00 | 0.00 | 0.00 | 48.00 |
| ಮವಿಕಂ | 14.00 | 0.00 | 0.00 | 8.00 | 22.00 |
| ಹುವಿಕಂ | 70.00 | 54.00* | 20.00 | 0.00 | 144.00 |
| ಗುವಿಕಂ | 40.00 | 37.00 | 2.00 | 2.00 | 81.00 |
| ಚಾವಿಸನಿನಿ | 25.00 | 20.00 | 10.00 | 0.00 | 55.00 |
| **ಒಟ್ಟು** | **197.00** | **111.00** | **32.00** | **10.00** | **350.00** |

*ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ನೇರ ಬಿಡಗುಡೆ ಮಾಡಿರುವ ರೂ. 54.00 ಕೋಟಿಗಳಲ್ಲಿ ರೂ. 4.00 ಕೋಟಿಯನ್ನು ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘದ ಬಾಬ್ತು ಸಹಾಯಧನವೆಂದು ಲೆಕ್ಕೀಕರಿಸುವುದು.

2. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 197.00 ಕೋಟಿಗಳು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ರೂ. 32.00 ಕೋಟಿಗಳು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ರೂ. 54.00 ಕೋಟಿಗಳು, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ರೂ. 37.00 ಕೋಟಿಗಳು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಕ್ಕೆ ರೂ. 30.00 ಕೋಟಿಗಳನ್ನು ಬಿಡುಗಡೆ ಮಾಡಿದೆ.

3. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ವಿದ್ಯುತ್ ಸರಬರಾಜು ಕಂಪನಿಗಳು ಹಣ ಸ್ವೀಕೃತ ರಸೀತಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

4. ಮೇಲಿನ ಕೋಷ್ಟಕಗಳಲ್ಲಿರುವಂತೆ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಗಳ ಪರವಾಗಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಮರುಹಂಚಿಕೆ ಮಾಡಿ ಬಿಡುಗಡೆ ಮಾಡಿರುವ ರೂ. 32.00 ಕೋಟಿಗಳ ಸಹಾಯಧನವನ್ನು ಗುಜರಾತ್ ಊರ್ಜಾ ವಿಕಾಸ ನಿಗಮ ನಿಯಮಿತ (GUVNL) ದಿಂದ ಖರೀದಿಸುತ್ತಿರುವ ಅಲ್ಪಾವಧಿ ವಿದ್ಯುತ್ ಖರೀದಿ ವೆಚ್ಚ ಭರಿಸಲು ಬಿಡಗಡೆ ಮಾಡಿದೆ.

5. ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ. 10.00 ಕೋಟಿಗಳನ್ನು ಜಿಂದಾಲ್ ಸ್ಟೀಲ್ ವರ್ಕ್ಸ್ ಪವರ್ ಟ್ರೇಡಿಂಗ್ ಕಂಪನಿ (JSWPTC) ದಿಂದ ಖರೀದಿಸಿರುವ ವಿದ್ಯುತ್ ಖರೀದಿಯ ಬಾಕಿಗೆ ಲೆಕ್ಕೀಕರಿಸುವುದು.

6. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

7. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

8. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟುಗಳಿಗೆ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾ ಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗು ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

9. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : FD 01 TFP 2013, ಬೆಂಗಳೂರು, ದಿನಾಂಕ : 20-04-2013ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**P.R. 649**

## INFORMATION TECHNOLOGY, BIO-TECHNOLOGY AND SCIENCE AND TECHNOLOGY SECRETARIAT

**Sub :** Constitution of Committee for use of Technology for Tablet PCs in Education Sector-KIG Report recommendations-Reg.

**PREAMBLE :**

The Karnataka ICT Group 2020 in the Report submitted to the State Government on 8th January, 2013, has recommended to use technology to enhance access to education and knowledge both at the school level and at the college level. The Group has recommended that Government provide tablets with wireless 3G connection to students from Standard 7 and above in State Government schools, pre-loaded with teaching material for each class and access to a portal where they can download the latest teaching materials while providing best in class content both in Kannada and English. The most important aspect of this is the content and specifications of the Tablet PCs.

In order to implement the recommendations of the ICT Group and to guide regarding the necessary steps for content development and specifications of the table PCs to be provided to the students, it has been decided to constitute a Committee, Hence the order.

**GOVERNMENT ORDER NO. ITD 05 PRM 2012, BANGALORE, DATED : 15th May, 2013.**

In the circumstances explained above, Government is pleased to constitute a Committee under the Chairmanship of Principal Secretary, Dept. of IT, BT and S&T, Govt. of Karnataka to guide and suggest the necessary steps for use of technology, content development and specifications of the Tablet PCs to be given to the students from Standard 7 and above in State Government schools. The Committee shall consist of the following Members :

| | | |
|---|---|---|
| 1. | Principal Secretary-Dept. of IT, BT and S&T | Chairman |
| 2. | Principal Secretary-Higher Education | Member. |
| 3. | Principal Secretay-Dept. of e-Governance | Member |
| 4. | Secretary-Primary and Secondary Education | Member |
| 5. | Director-IIIT Bangalore | Member |
| 6. | Prof. Chandrashekar-IIIT Bangalore | Member |
| 7. | Prof. Sridhar-Bangalore University | Member |
| 8. | Mr. Srinirajam, Founder & CEO-Ittiam Systems | Member |
| 9. | Mr. Satya Gupta-Member Karnataka ICT Group | Member |
| 10. | Director-IT & BT | Member Secretary |

By Order and in the name of the Governor of Karnataka,

**M. VASUDEVA MURTHY**

Deputy Secretary to Government,

IT, BT and S & T Department.

**P.R. 665**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ :** ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮವು ಅನುಷ್ಠಾನಗೊಳಿಸುತ್ತಿರುವ ವಿವಿಧ ಯೋಜನೆಗಳಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲು ಹಾಲಿ ಜಾರಿಯಲ್ಲಿರುವ ವಾರ್ಷಿಕ ಆದಾಯ ಮಿತಿಯನ್ನು ಹೆಚ್ಚಿಸುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಎಸ್‌ಡಬ್ಲ್ಯೂಎಲ್ 47 ಬಿಸಿಎ 92, ದಿನಾಂಕ : 18–7–1996.
2. ವ್ಯವಸ್ಥಾಪಕ ನಿರ್ದೇಶಕರು, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ : ದೇಹಿನಿ/ಸ/ಆಮಿ/ಸಿಆರ್–28/20–11, ದಿನಾಂಕ : 15–03–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮವು ಅನುಷ್ಠಾನಗೊಳಿಸುತ್ತಿರುವ ವಿವಿಧ ಯೋಜನೆಗಳಡಿಯಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲು ಅವರ ಕುಟುಂಬದ ವಾರ್ಷಿಕ ಆದಾಯ ರೂ. 22,000/– ಗಳನ್ನು ನಿಗದಿಪಡಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಇವರು ರಾಷ್ಟ್ರೀಯ ಹಿಂದುಳಿದ ವರ್ಗಗಳ ಹಣಕಾಸು ಮತ್ತು ಅಭಿವೃದ್ಧಿ ನಿಗಮವು ಫಲಾನುಭವಿಗಳನ್ನು ಆಯ್ಕೆ ಮಾಡಲು ಕುಟುಂಬ ವಾರ್ಷಿಕ ಆದಾಯದ ಮಿತಿಯನ್ನು ಗ್ರಾಮಾಂತರ ಪ್ರದೇಶದವರಿಗೆ ರೂ. 40,000/– ಗಳು ಹಾಗೂ ನಗರ ಪ್ರದೇಶದವರಿಗೆ ರೂ. 55,000/–ಗಳಿಗೆ ನಿಗದಿಪಡಿಸಲಾಗಿರುತ್ತದೆ ಎಂದು ದಿನಾಂಕ : 12–09–2012 ರ ಪತ್ರದಲ್ಲಿ ತಿಳಿಸಿದ್ದಾರೆಂದು ವರದಿ ಮಾಡಿರುತ್ತಾರೆ. ಪ್ರಸ್ತುತ ಹಿಂದುಳಿದ ವರ್ಗಗಳ ಸಂಘ ಸಂಸ್ಥೆಗಳ ಮುಖಂಡರು ಹಾಲಿ ಜಾರಿಯಲ್ಲಿರುವ ಆದಾಯ ಮಿತಿಯನ್ನು ಹೆಚ್ಚಿಸುವಂತೆ ಕೋರಿರುತ್ತಾರೆ. ನಿಗಮದ 142ನೇ ನಿರ್ದೇಶಕ ಮಂಡಳಿಯ ಸಭೆಯಲ್ಲಿ ಕುಟುಂಬ ವಾರ್ಷಿಕ ಆದಾಯದ ಮಿತಿಯನ್ನು NBCFDC ಮಾದರಿಯಲ್ಲಿ ಹೆಚ್ಚಿಸಲು ಸರ್ಕಾರದ ಅನುಮೋದನೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಲು ನಿರ್ಣಯಿಸಲಾಗಿರುತ್ತದೆ ಎಂದು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಬಿಸಿಡಬ್ಲ್ಯೂ 525 ಬಿಎಂಎಸ್ 2012, ಬೆಂಗಳೂರು, ದಿನಾಂಕ : 25–05–2013**

ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮವು ಅನುಷ್ಠಾನಗೊಳಿಸುತ್ತಿರುವ ವಿವಿಧ ಸಾಲ ಮತ್ತು ಸಹಾಯಧನ ಯೋಜನೆಗಳ (ವಿದೇಶಿ ವ್ಯಾಸಂಗ ಯೋಜನೆ ಹೊರತುಪಡಿಸಿ) ಫಲಾನುಭವಿಗಳ ಕುಟುಂಬ ವಾರ್ಷಿಕ ಆದಾಯ ಮಿತಿಯನ್ನು ಗ್ರಾಮಾಂತರ ಪ್ರದೇಶದವರಿಗೆ ರೂ. 40,000/– ಗಳು ಹಾಗೂ ನಗರ ಪ್ರದೇಶದವರಿಗೆ ರೂ. 55,000/–ಗಳಿಗೆ ನಿಗದಿಪಡಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 159 ವೆಚ್ಚ–3/13, ದಿನಾಂಕ : 26–03–2013ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಜಿ. ಮುಳಕೂರ**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

P.R. 666

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಆಕುಕ 101 ಪಿಐಎಂ 2013, ಬೆಂಗಳೂರು, ದಿನಾಂಕ : 28–05–2013.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 604 ಪಿಐಎಂ 2011, ದಿನಾಂಕ : 10–09–2012ರ ಕ್ರಮ ಸಂಖ್ಯೆ (1) ರಲ್ಲಿರುವ **"ಡಾ॥ ಸುರೇಶ್ ಎಂ. ಬಿರಾದರ್"** ಎಂಬುದರ ಬದಲಾಗಿ **"ಡಾ॥ ಬಿರಾದಾರ್ ಸುರೇಶ್ ಎಂ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎನ್. ಹರಿಣಿಯಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಭಾರತೀಯ ವೈದ್ಯಪದ್ಧತಿ ಮತ್ತು ಸಮನ್ವಯ).

P.R. 669

## ತೋಟಗಾರಿಕೆ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ತೋಇ 76 ರೇಉನಿ 2012, ಬೆಂಗಳೂರು, ದಿನಾಂಕ : 01–06–2013.**

ಸರ್ಕಾರದ ಆದೇಶ ಸಂಖ್ಯೆ : ತೋಇ 76 ರೇಉನಿ 2012, ದಿನಾಂಕ : 18–04–2013ರ ಆದೇಶ ಭಾಗದ ಕಂಡಿಕೆ 2ರಲ್ಲಿ **"ಲೆಕ್ಕ ಶೀರ್ಷಿಕೆ 2851–00–107–1–40 ರೇಷ್ಮೆ ಕೃಷಿ ಅಭಿವೃದ್ಧಿಗೆ ನೂತನ ಕರ್ತೃತ್ವ ಶಕ್ತಿ (ಯೋಜನೆ) ರಡಿಯಲ್ಲಿ"** ಎಂಬುದರ ಬದಲಾಗಿ **"ಲೆಕ್ಕ ಶೀರ್ಷಿಕೆ 2851–00–107–1–40(059) ರೇಷ್ಮೆ ಕೃಷಿ ಅಭಿವೃದ್ಧಿಗೆ ನೂತನ ಕರ್ತೃತ್ವ ಶಕ್ತಿ (ಯೋಜನೆ) ರಡಿಯಲ್ಲಿ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಎಸ್. ಚಂದ್ರಶೇಖರ್**
ಪೀಠಾಧಿಕಾರಿ,
ತೋಟಗಾರಿಕೆ ಇಲಾಖೆ (ರೇಷ್ಮೆ).

P.R. 671

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ** : ಶ್ರೀ ಸಚ್ಚಿದಾನಂದ ಮೂರ್ತಿ, ಅಧ್ಯಕ್ಷರು, ಕಿಯೋನಿಕ್ಸ್, ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** 1. ಅಧಿಸೂಚನೆ ಸಂಖ್ಯೆ : ಮಾತಂಇ 51 ಡಿಐಎಸ್ 2012 (ಪಿ), ದಿನಾಂಕ : 31-12-2012.

2. ಶ್ರೀ ಸಚ್ಚಿದಾನಂದ ಮೂರ್ತಿ, ಅಧ್ಯಕ್ಷರು, ಕಿಯೋನಿಕ್ಸ್, ಇವರ ರಾಜೀನಾಮೆ ಪತ್ರ ದಿನಾಂಕ : 17-05-2013.

**ಪ್ರಸ್ತಾವನೆ :**

ಶ್ರೀ ಸಚ್ಚಿದಾನಂದ ಮೂರ್ತಿ, ಸಮೃದ್ಧಿ ನಿಲಯ, ಎಸ್‌ಆರ್ ಲೇಔಟ್, 9ನೇ ಕ್ರಾಸ್, ಕೇಂಬ್ರಿಡ್ಜ್ ಕಾಲೇಜ್ ಎದುರು ಕೆ.ಆರ್.ಪುರಂ, ಬೆಂಗಳೂರು ಇವರನ್ನು ಓದಲಾದ (1)ರ ಅಧಿಸೂಚನೆಯಲ್ಲಿ ಕಿಯೋನಿಕ್ಸ್ ಸಂಸ್ಥೆಯ ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗಿರುತ್ತದೆ.

ಶ್ರೀ ಸಚ್ಚಿದಾನಂದ ಮೂರ್ತಿ, ಅಧ್ಯಕ್ಷರು, ಕಿಯೋನಿಕ್ಸ್, ಇವರು ಓದಲಾದ (2)ರ ಪತ್ರದಲ್ಲಿ ದಿನಾಂಕ : 17-05-2013ರ ಮಧ್ಯಾಹ್ನ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆಯನ್ನು ಸಲ್ಲಿಸುತ್ತಿರುವುದಾಗಿ ತಿಳಿಸಿರುತ್ತಾರೆ.

ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಐಟಿಡಿ 51 ಡಿಐಎಸ್ 2012 (ಪಿ-2), ಬೆಂಗಳೂರು, ದಿನಾಂಕ : 31-05-2013**

ಕಿಯೋನಿಕ್ಸ್ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಸಚ್ಚಿದಾನಂದ ಮೂರ್ತಿ, ಇವರ ರಾಜೀನಾಮೆಯನ್ನು ದಿನಾಂಕ : 17-05-2013ರ ಮಧ್ಯಾಹ್ನದಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಾಸುದೇವ ಮೂರ್ತಿ,**

ಸರ್ಕಾರದ ಉಪ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ

ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**P.R. 673**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ** : ಶ್ರೀ ತ್ರಿವಿಕ್ರಮ ಜೋಶಿ, ಅಧ್ಯಕ್ಷರು ಡಾ॥ ಡಿ.ಎಂ. ನಂಜುಂಡಪ್ಪ ವರದಿ ಅನುಷ್ಠಾನ ಉನ್ನತಾಧಿಕಾರಿ ಸಮಿತಿ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** 1. ಅಧಿಸೂಚನೆ ಸಂಖ್ಯೆ : ಪಿಡಿ 5 ಎಸ್‌ಪಿಬಿ 2013, ದಿನಾಂಕ : 16-01-2013.

2. ಮಾನ್ಯ ಅಧ್ಯಕ್ಷರು, ಡಾ॥ ಡಿ.ಎಂ. ನಂಜುಂಡಪ್ಪ ವರದಿ ಅನುಷ್ಠಾನ ಉನ್ನತಾಧಿಕಾರಿ ಸಮಿತಿ ಇವರ ರಾಜೀನಾಮೆ ಅ.ಸ.ಪತ್ರ ಸಂಖ್ಯೆ : ನವ:ಉಸ:67:2013, ದಿನಾಂಕ : 15-05-2013.

**ಪ್ರಸ್ತಾವನೆ :**

ಶ್ರೀ ತ್ರಿವಿಕ್ರಮ ಜೋಶಿ, ಸತ್ಯನಾಥ್ ಕಾಲೋನಿ, ರಾಯಚೂರು ಇವರನ್ನು ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ಡಾ॥ ಡಿ.ಎಂ. ನಂಜುಂಡಪ್ಪ ವರದಿ ಅನುಷ್ಠಾನ ಉನ್ನತಾಧಿಕಾರಿ ಸಮಿತಿಯ ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗಿರುತ್ತದೆ.

ಶ್ರೀ ತ್ರಿವಿಕ್ರಮ ಜೋಶಿ, ಅಧ್ಯಕ್ಷರು, ಡಾ॥ ಡಿ.ಎಂ. ನಂಜುಂಡಪ್ಪ ವರದಿ ಅನುಷ್ಠಾನ ಉನ್ನತಾಧಿಕಾರಿ ಸಮಿತಿ ಇವರು ಮೇಲೆ ಓದಲಾದ (2)ರ ಅ.ಸ.ಪತ್ರದಲ್ಲಿ ದಿನಾಂಕ : 15-05-2013 ರಂದು ಅಧ್ಯಕ್ಷರ ಸ್ಥಾನಕ್ಕೆ ರಾಜೀನಾಮೆಯನ್ನು ನೀಡಿರುತ್ತಾರೆ.

ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಪಿಡಿ 5 ಎಸ್‌ಪಿಬಿ 2013, ಬೆಂಗಳೂರು, ದಿನಾಂಕ : 21ನೇ ಮೇ 2013**

ಡಾ॥ ಡಿ.ಎಂ. ನಂಜುಂಡಪ್ಪ ವರದಿ ಅನುಷ್ಠಾನ ಉನ್ನತಾಧಿಕಾರಿ ಸಮಿತಿಯ ಅಧ್ಯಕ್ಷರಾದ ಶ್ರೀ ತ್ರಿವಿಕ್ರಮ ಜೋಶಿ, ಇವರು ಅಧ್ಯಕ್ಷರ ಸ್ಥಾನಕ್ಕೆ ದಿನಾಂಕ : 15-05-2013ರಂದು ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ : 15-05-2013ರಿಂದಲೇ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಷಾಬಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**P.R. 674**

**SC - 100**

## ತೋಟಗಾರಿಕೆ ಸಚಿವಾಲಯ

**ವಿಷಯ:** ಡಾ॥ ಡಿ. ಟಿ. ಆನಂದಕುಮಾರ್, ಸಹಾಯಕ ತೋಟಗಾರಿಕೆ ಅಧಿಕಾರಿ, ರೈತ ಸಂಪರ್ಕ ಕೇಂದ್ರ, ಮಾಯಕೊಂಡ, ದಾವಣಗೆರೆ ತಾಲ್ಲೂಕು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** 1) ಉಪ ನಿಬಂಧಕರು, ವಿಚಾರಣೆ–I ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ. COMPT/UPLOK/BD/466/2010/DRE-1, ದಿನಾಂಕ : 28–01–2013.

2) ಆದೇಶ ಸಂಖ್ಯೆ : ತೋಇ 374 ತೋಸೇಪ 2009, ದಿನಾಂಕ : 10–06–2010.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ : 1ರಲ್ಲಿ ಓದಲಾದ ಪತ್ರದಲ್ಲಿ ಡಾ॥ ಡಿ. ಟಿ. ಆನಂದಕುಮಾರ್, ಸಹಾಯಕ ತೋಟಗಾರಿಕೆ ಅಧಿಕಾರಿ, ಇವರು ರೈತ ಸಂಪರ್ಕ ಕೇಂದ್ರ, ಮಾಯಕೊಂಡ, ದಾವಣಗೆರೆ ತಾಲ್ಲೂಕು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಶ್ರೀ ಕೆ. ಎಂ. ರುದ್ರೇಶ್ ತಂದೆ ಮೃತ್ಯುಂಜಯಪ್ಪ, ಕೊಡಗನೂರು ಗ್ರಾಮ, ದಾವಣಗೆರೆ ತಾಲ್ಲೂಕು/ಜಿಲ್ಲೆ ಇವರು ಖರೀದಿಸಿದ್ದ ಅಡಿಕೆ ಸುಲಿಯುವ ಯಂತ್ರಕ್ಕೆ ಇಲಾಖೆ ವತಿಯಿಂದ ಸಹಾಯ ಧನ ಬಿಡುಗಡೆ ಮಾಡುವುದಕ್ಕಾಗಿ ರೂ. 5,000/–ಗಳ ಅಕ್ರಮ ಸಂಭಾವನೆಯನ್ನು ಆಗ್ರಹಿಸಿದ್ದಾರೆಂದು ದೂರು ನೀಡಿದ್ದ ಹಿನ್ನೆಲೆಯಲ್ಲಿ ಅಧಿಕಾರಿಯನ್ನು ಲೋಕಾಯುಕ್ತ ಪೊಲೀಸರು ದಿನಾಂಕ : 14–08–2009ರಂದು ಟ್ರ್ಯಾಪ್ ಮಾಡಿದ್ದು, ಈ ಬಗ್ಗೆ ಅಧಿಕಾರಿಗೆ ಲೋಕಾಯುಕ್ತವು ಕಾರಣ ಕೇಳುವ ನೋಟೀಸು ನೀಡಿದ್ದು, ಈ ಕಾರಣ ಕೇಳುವ ನೋಟೀಸಿಗೆ ಅಧಿಕಾರಿಯು ನಿಗದಿತ ಅವಧಿಯೊಳಗೆ ವಿವರಣೆ ನೀಡಲು ವಿಫಲರಾಗಿದ್ದು, ಹಾಗೂ ಲಭ್ಯವಿರುವ ದಾಖಲಾತಿಗಳ ಆಧಾರದ ಮೇಲೆ ಸದರಿಯವರ ವಿರುದ್ಧದ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬಂದಿದ್ದು, ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 3ನ್ನು ಉಲ್ಲಂಘಿಸಿರುವುದರಿಂದ ಅಧಿಕಾರಿಯ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮ 14(ಎ)ರನ್ವಯ ಇಲಾಖಾ ವಿಚಾರಣೆ ನಡೆಸಲು ಆದೇಶ ಹೊರಡಿಸುವಂತೆ ಕೋರಲಾಗಿದೆ.

ಮೇಲೆ ಕ್ರ.ಸಂ. 2ರಲ್ಲಿ ಓದಲಾದ ಆದೇಶದಲ್ಲಿ ಅಧಿಕಾರಿಯು ಲಂಚಕ್ಕಾಗಿ ಆಗ್ರಹಿಸಿದಾಗ ಲೋಕಾಯುಕ್ತ ಪೊಲೀಸರಿಂದ ಟ್ರ್ಯಾಪ್ ಆಗಿದ್ದ ಕಾರಣ, ಅಧಿಕಾರಿಯನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ತೋಇ 374 ತೋಸೇಪ 2009, ಬೆಂಗಳೂರು, ದಿನಾಂಕ : 22ನೇ ಫೆಬ್ರವರಿ 2013**

ಡಾ॥ ಡಿ. ಟಿ. ಆನಂದಕುಮಾರ್, ಸಹಾಯಕ ತೋಟಗಾರಿಕೆ ಅಧಿಕಾರಿ, ಇವರು ರೈತ ಸಂಪರ್ಕ ಕೇಂದ್ರ ಮಾಯಕೊಂಡ, ದಾವಣಗೆರೆ ತಾಲ್ಲೂಕು ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಿದ ಅವಧಿಯಲ್ಲಿನ ಆರೋಪಗಳಿಗೆ ಸಂಬಂಧಿಸಿದಂತೆ ಇಲಾಖೆ ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮ 14 (ಎ)ರನ್ವಯ ನಡೆಸಲು ಪ್ರಕರಣವನ್ನು ಉಪ ಲೋಕಾಯುಕ್ತರಿಗೆ ವಹಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ವಿ. ರಾಮಲಿಂಗಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ.

**P.R. 656**

## ಕಂದಾಯ ಸಚಿವಾಲಯ

**ವಿಷಯ:** ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಾಜ್ಯ ಸರ್ಕಾರದ ಭೂನೀತಿಯನ್ನು ರೂಪಿಸಲು ಸಮಿತಿಯ ರಚನೆ ಬಗ್ಗೆ.

**ಓದಲಾಗಿದೆ:** 1) ರಾಜ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ : 12249/2003, ದಿನಾಂಕ : 13–08–2012 ಹಾಗೂ ದಿನಾಂಕ : 17–08–2012ರ ಸೂಚನೆಗಳು.

2) ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 609 ಎಲ್‌ಜಿಬಿ 2012, ದಿನಾಂಕ : 03–01–2013.

**ಪ್ರಸ್ತಾವನೆ:**

ಭೂಮಿಯು ಪ್ರಾದೇಶಿಕ ಆರ್ಥಿಕ ಅಭಿವೃದ್ಧಿಗೆ ಒಂದು ಮುಖ್ಯವಾದ ಅಂಶವಾಗಿರುತ್ತದೆ. ಭೂಮಿಯನ್ನು ಸಂಪನ್ಮೂಲ ಕ್ರೋಢೀಕರಣ, ಸಾಮಾಜಿಕ ನ್ಯಾಯ ನಿರ್ವಹಣೆ ಮತ್ತು ಸಾರ್ವಜನಿಕ ಹಿತದೃಷ್ಟಿಯಿಂದ ಸರ್ವಾಂಗೀಣ ಅಭಿವೃದ್ಧಿಗೆ ಸರಿಯಾದ ರೀತಿ ಸದ್ಬಳಸಿಕೊಳ್ಳಬೇಕಾಗುತ್ತದೆ. ಆದಾಗ್ಯೂ ತೀವ್ರಗತಿಯ ನಗರೀಕರಣದಿಂದಾಗಿ ಜಮೀನಿನ ಬೆಲೆಗಳು ಹೆಚ್ಚುತ್ತಿದ್ದು, ಉಳಿಕೆ ಭೂಮಿಯ ಬಳಕೆಯ ಮೇಲೆ ಒತ್ತಡವು ಹೆಚ್ಚಾಗುತ್ತಿರುತ್ತದೆ. ಇದಕ್ಕೂ ಮಿಗಿಲಾಗಿ ಸರ್ಕಾರಿ ಭೂಮಿಗಳ ದಾಖಲೆಗಳು ಸರಿಯಿಲ್ಲದ ಕಾರಣ ಒತ್ತುವರಿ ಪ್ರಕರಣಗಳು ಹೆಚ್ಚಾಗಿದ್ದು, ನ್ಯಾಯಾಲಯದಲ್ಲಿ ಈ ಬಗ್ಗೆ ಹೆಚ್ಚಿನ ಪ್ರಕರಣಗಳು ದಾಖಲಾಗುತ್ತಿವೆ. ಈ ಹಿನ್ನೆಲೆಯಲ್ಲಿ ರಾಜ್ಯ ಉಚ್ಚ ನ್ಯಾಯಾಲಯವು ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಪ್ರಸಕ್ತ ಜಾರಿಯಲ್ಲಿರುವ ವ್ಯವಸ್ಥೆಯನ್ನು ಸರಿಪಡಿಸುವತ್ತ ಕೆಲವೊಂದು ಸಲಹೆ ಸೂಚನೆಗಳನ್ನು ನೀಡುತ್ತಾ, ಭೂ ಮಾಪನ ಮತ್ತು ಭೂ ದಾಖಲೆಗಳ ಇಲಾಖೆಯ ಆಯುಕ್ತರನ್ನು ಕೋರ್ಟ್ ಕಮೀಷನರ್ ಆಗಿ ನಾಮನಿರ್ದೇಶಿಸಿ ಈ ನಿಟ್ಟಿನಲ್ಲಿ ಸರ್ಕಾರವು ತೆಗೆದುಕೊಂಡ ಕ್ರಮಗಳನ್ನು ನ್ಯಾಯಾಲಯಕ್ಕೆ ತಿಳಿಸಬೇಕೆಂದು ಆದೇಶಿಸಿರುತ್ತದೆ.

ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ (2)ರಲ್ಲಿ ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಉನ್ನತಾಧಿಕಾರಸ್ಥ ಸಮಿತಿಯೊಂದನ್ನು ರಚಿಸಲಾಗಿದ್ದು, ಸದರಿ ಸಮಿತಿಯು ದಿನಾಂಕ : 26–03–2013ರ ಸಭೆಯಲ್ಲಿ ರಾಜ್ಯ ಸರ್ಕಾರದ ಭೂನೀತಿಯನ್ನು ರಚಿಸಲು ಅನುವಾಗುವಂತೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಉನ್ನತಾಧಿಕಾರಿಗಳ ಸಮಿತಿಯೊಂದನ್ನು ರಚಿಸಲು ನಿರ್ಣಯಿಸಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 131 ಎಲ್‌ಜಿಪಿ 2013, ಬೆಂಗಳೂರು, ದಿನಾಂಕ : 30ನೇ ಮೇ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಾಜ್ಯ ಸರ್ಕಾರದ ಭೂನೀತಿಯನ್ನು ರೂಪಿಸಲು ಈ ಕೆಳಕಂಡ ಅಧಿಕಾರಿಗಳ ಸಮಿತಿಯೊಂದನ್ನು ರಚಿಸಲು ಆದೇಶಿಸಿದೆ.

| | | |
|---|---|---|
| 1 | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು. | ಅಧ್ಯಕ್ಷರು |
| 2 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ. | ಸದಸ್ಯರು |
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ. | ಸದಸ್ಯರು |
| 5 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ. | ಸದಸ್ಯರು |
| 6 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ. | ಸದಸ್ಯರು |
| 7 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ. | ಸದಸ್ಯರು |
| 8 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತ. | ಸದಸ್ಯರು |
| 9 | ಆಯುಕ್ತರು, ಭೂ ಮಾಪನ ಮತ್ತು ಭೂ ದಾಖಲೆಗಳ ಇಲಾಖೆ. | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ [ಭೂ ಮಂಜೂರಾತಿ–I]

P.R. 684

SC - 100

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ವೀರಭದ್ರಪ್ಪ, ಮಾಜಿ ಸಿ.ಪಿ.ಸಿ., ಸಿಂಧನೂರು ನಗರ ಪೊಲೀಸ್ ಠಾಣೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶ್ಯಾನ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ : ಇವಿ/1/ಈವ/2010 ಆ.ಪು. ಸಂಖ್ಯೆ : 660/ಈವ/2010, ದಿನಾಂಕ : 03–11–2010.
2) ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ : ಸಿಬಿ(8)117/2008–09, ದಿನಾಂಕ : 16–08–2011.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 15–02–2012.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಸಿಬಿ(8)117/2008–09, ದಿನಾಂಕ : 08–11–2012.

**ಪ್ರಸ್ತಾವನೆ:**

ಶ್ರೀ ವೀರಭದ್ರಪ್ಪ, ಸಿ.ಪಿ.ಸಿ., ಇವರು ಸಿಂಧನೂರು ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅಕ್ರಮ ಸಂಭಾವನೆಯನ್ನು ಪಡೆದು, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರೊಂದಿಗೆ 8ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :–**

"ಶ್ರೀ ಅನಂತರಾಜು ಬಿನ್ ಗುರಪ್ಪ ಚೌಲ್, ಸಹ ಶಿಕ್ಷಕರು, ಕರ್ನಾಟಕ ಪ್ರೌಢ ಶಾಲೆ, ಗುಲ್ಬರ್ಗಾ ಇವರು ಲಿಂಗಸುಗೂರಿನಲ್ಲಿ ಒಂದು ವೃದ್ಧಾಪ್ಯ ಶಾಲೆಯನ್ನು ನಡೆಸುತ್ತಿದ್ದು ಸರ್ಕಾರದಿಂದ ಈ ಸಂಬಂಧದಲ್ಲಿ ಹಣ ಮಂಜೂರು ಆಗುತ್ತಿದ್ದು, ಸರ್ಕಾರದಿಂದ ಮಂಜೂರಾದ ಹಣದ

ದುರ್ಬಳಕೆಯಾದ ಬಗ್ಗೆ ಸ್ಥಳೀಯ ಪೊಲೀಸ್ ಠಾಣೆಯಲ್ಲಿ ದೂರು ದಾಖಲಿಸಿದ್ದರ ಸಂಬಂಧ ಶ್ರೀ ಅನಂತರಾಜು ಬಿನ್ ಗುರಪ್ಪ ಚೌಲ್ ಇವರು ಮಾನ್ಯ ಉಚ್ಚ ನ್ಯಾಯಾಲಯದಿಂದ ನಿರೀಕ್ಷಣಾ ಜಾಮೀನು ಪಡೆದಿದ್ದರೂ ನೀವು ಸದರಿಯವರನ್ನು ನಿರೀಕ್ಷಣಾ ಜಾಮೀನಿನ ಮೇಲೆ ಬಿಡುಗಡೆ ಮಾಡಲು ರೂ. 52,000–00 ಅಕ್ರಮ ಸಂಭಾವನೆ ಕೊಡುವಂತೆ ಹೇಳಿ ಅದರಲ್ಲಿಯ ಮೊದಲನೇ ಕಂತಾಗಿ ರೂ. 25,000/– ಕೊಡುವಂತೆ ಒತ್ತಾಯಿಸಿ ಸದರಿ ಹಣವನ್ನು ಪಡೆಯಲು ಶ್ರೀ ವೀರಭದ್ರಪ್ಪ, ಸಿಪಿಸಿ–24, ಲಿಂಗಸುಗೂರು ಪೊಲೀಸ್ ಠಾಣೆ, ಇವರನ್ನು ಕಳುಹಿಸುವುದಾಗಿ ಹೇಳಿ ಸದರಿಯವರ ಕೈಯಲ್ಲಿ ಹಣಕೊಡುವಂತೆ ತಿಳಿಸಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿದ ಆರೋಪ.

ನೀವು ಲಿಂಗಸುಗೂರು ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ. ಅಂತಾ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ : 19–07–2007 ರಂದು ಲಿಂಗಸುಗೂರು ಸಹಾಯಕ ಆಯುಕ್ತರು ಶ್ರೀ ಅನಂತರಾಜು ತಂದೆ ಗುರಪ್ಪ ಚೌಲ್, ಇವರು ನಡೆಸುತ್ತಿದ್ದ ವೃದ್ಧಾಶ್ರಮಕ್ಕೆ ಬೇಟಿ ನೀಡಿ ಆಶ್ರಮದ ಹಣ ದುರುಪಯೋಗವಾದ ಬಗ್ಗೆ ಲಿಂಗಸುಗೂರು ಪೊಲೀಸ್ ಠಾಣೆಯಲ್ಲಿ ದೂರನ್ನು ನೀಡಿದ್ದು ಇದನ್ನು ಅರಿತ ಶ್ರೀ ಅನಂತರಾಜು ತಂದೆ ಗುರಪ್ಪ ಚೌಲ್ ಇವರು ಉಚ್ಚ ನ್ಯಾಯಾಲಯದಿಂದ ಜಾಮೀನನ್ನು ಪಡೆದು ಲಿಂಗಸುಗೂರು ಠಾಣೆಗೆ ಹಾಜರಾಗಿ ತಾನು ಪಡೆದ ಜಾಮೀನಿನ ಅನ್ವಯ ತನ್ನನ್ನು ಜಾಮೀನಿನ ಮೇಲೆ ಬಿಡಬೇಕೆಂದು ಕೋರಲಾಗಿ ಎ ಮಗನೆ ನೀನು ಸರ್ಕಾರದಿಂದ ಒಟ್ಟು ರೂ. 3,64,133/–ಗಳನ್ನು ಪಡೆದಿರುವಿ ಇದಕ್ಕೆ ನೀನು 15% ರಷ್ಟು ಅಂದಾಜು ರೂ. 52,000/– ವನ್ನು ನನಗೆ ನೀಡಿದರೇ ಜಾಮೀನಿನ ಮೇಲೆ ಬಿಡುತ್ತೇನೆ. ಇಲ್ಲದಿದ್ದರೇ ನಿನ್ನ ಬಟ್ಟೆ ಬಿಚ್ಚಿ ಅರೆಸ್ಟು ಮಾಡುತ್ತೇನೆ ಎಂದು ಹೇಳಿ ಅಸಭ್ಯತನದಿಂದ ವರ್ತಿಸಿ ಸದರಿ ಮೊತ್ತದಲ್ಲಿಯ ಒಂದು ಕಂತು ರೂ. 25,000/–ನ್ನು ಶ್ರೀ ವೀರಭದ್ರಪ್ಪ ಸಿಪಿಸಿಯವರ ಕೈಯಲ್ಲಿ ನೀಡುವಂತೆ ಒತ್ತಾಯಿಸಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನದಿಂದ ವರ್ತಿಸಿ ಅಮಾಯಕರಿಗೆ ಅಕ್ರಮ ಸಂಭಾವನೆ ನೀಡುವಂತೆ ತೊಂದರೆ ನೀಡಿರುವಿರಿ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ದಿನಾಂಕ : 03–11–2010ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ ಮತ್ತು ದಿನಾಂಕ : 19–10–2007 ರಿಂದ 12–02–2008ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 16–08–2011ರ ಆದೇಶದಲ್ಲಿ ತಿರಸ್ಕರಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುವುದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಒಇ 22 ಪೊಸಿಅ 2012, ಬೆಂಗಳೂರು, ದಿನಾಂಕ : 01ನೇ ಜೂನ್ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೀರಭದ್ರಪ್ಪ ಮಾಜಿ ಸಿ.ಪಿ.ಸಿ., ಸಿಂಧನೂರು ನಗರ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಎನ್. ರವಿಪ್ರಕಾಶ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**P.R. 685**

**SC - 30**

## ಒಳಾಡಳಿತ ಸಚಿವಾಲಯ

**ವಿಷಯ:** ಸಿಟಿ ಸಿವಿಲ್ ನ್ಯಾಯಾಲಯ ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘರ್ಷಣೆ ಕುರಿತು ನ್ಯಾ.ಮೂ. ಶ್ರೀ ಆರ್. ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದ ಮಂಡಿಸಿದ ಶ್ರೀ ಜಿ. ಕೆ. ಬೇಕಲ್, ವಕೀಲರು, (ನಿವೃತ್ತ ಉಪ ಪೊಲೀಸ್ ಆಯುಕ್ತರು) ಬೆಂಗಳೂರು ಇವರಿಗೆ ಸಂಭಾವನೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಹೆಚ್‌ಡಿ 4 ಪಿಸಿಇ 2012, ದಿನಾಂಕ : 09–03–2012.
2. ದಿನಾಂಕ : 13–08–2012ರ ಸರ್ಕಾರದ ಅಧಿಸೂಚನೆ ಸಂಖ್ಯೆ : ಹೆಚ್‌ಡಿ 11 ಪಿಸಿಇ 2012.
3. ಶ್ರೀ ಜಿ. ಕೆ. ಬೇಕಲ್, ವಕೀಲರು, ನಿವೃತ್ತ ಉಪ ಪೊಲೀಸ್ ಆಯುಕ್ತರು, ಬೆಂಗಳೂರು ಇವರ ಮನವಿ ದಿನಾಂಕ : 14–05–2013 ಹಾಗೂ 03–06–2013.

**ಪ್ರಸ್ತಾವನೆ:**

ದಿನಾಂಕ : 02–03–2012ರಂದು ಬೆಂಗಳೂರು ನಗರದ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘಟನೆಯ ಕುರಿತು ಕೂಲಂಕಷವಾಗಿ ತನಿಖೆ ನಡೆಸಲು ನ್ಯಾಯಮೂರ್ತಿ ಶ್ರೀ ಆರ್. ಜಿ. ವೈದ್ಯನಾಥ ಆಯೋಗವನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ನೇಮಿಸಲಾಗಿದೆ.

ಶ್ರೀ ಜಿ. ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೊಲೀಸ್ ಆಯುಕ್ತರು) ಬೆಂಗಳೂರು ಅವರನ್ನು ನ್ಯಾಯಮೂರ್ತಿ ಶ್ರೀ ಆರ್. ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದಿಸಲು ಮೇಲೆ ಓದಲಾದ (2)ರ ಆದೇಶದಲ್ಲಿ ನೇಮಕ ಮಾಡಲಾಗಿದೆ.

ಶ್ರೀ ಜಿ. ಕೆ. ಬೇಕಲ್, ವಕೀಲರು, ಬೆಂಗಳೂರು ಇವರು ಸರ್ಕಾರದ ಪರವಾಗಿ ದಿನಾಂಕ : 04–04–2013, 05-4–2013, 06–04–2013, 08–04–2013, 09–04–2013, 17–04–2013, 18–04–2013 ಮತ್ತು 26–04–2013ರಂದು ವಾದಿಸಿದ ಸಲುವಾಗಿ ಸಂಭಾವನೆಯಾಗಿ ಒಟ್ಟು ರೂ. 72,000/– (ಎಪ್ಪತ್ತೆರಡು ಸಾವಿರಗಳು ಮಾತ್ರ)ಗಳ ಮೊತ್ತವನ್ನು ಹಾಗೂ 14–05–2013, 15–05–2013,20–05–2013, 21–05–2013, 30–05–2013 ಹಾಗೂ 31–05–2013ರಂದು ವಾದಿಸಿದ ಸಲುವಾಗಿ ಸಂಭಾವನೆಯಾಗಿ ಒಟ್ಟು ರೂ. 56,000/– (ಐವತ್ತಾರು ಸಾವಿರಗಳು ಮಾತ್ರ)ಗಳ ಮೊತ್ತವನ್ನು ಮಂಜೂರು ಮಾಡುವಂತೆ ಮೇಲೆ–ಓದಲಾದ (3)ರ ಪತ್ರಗಳಲ್ಲಿ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 11 ಪಿಸಿಇ 2012, ಬೆಂಗಳೂರು, ದಿನಾಂಕ: 10ನೇ ಜೂನ್, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ. ಕೆ. ಬೇಕಲ್, ವಕೀಲರು (ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಇವರಿಗೆ ಈ ಕೆಳಕಂಡಂತೆ ಸಂಭಾವನೆಯನ್ನು ಮಂಜೂರು ಮಾಡಲಾಗಿದೆ.

| ಕ್ರ. ಸಂ. | ಸಂಭಾವನೆಯ ವಿವರ | ಮೊತ್ತ ರೂ. |
|---|---|---|
| 1 | Effective hearing (6 days) dated, 04-04-2013, 05-04-2013, 06-04-2013, 08-04-2013, 17-04-2013 & 18-04-2013 @ Rs. 10,000/- per day. | 60,000-00 |
| 2 | Non-effective hearing Two days 09-04-2013 & 26-04-2013 @ Rs. 6,000/- per day | 12,000-00 |
| | **ಮೊತ್ತ (ಎಪ್ಪತ್ತೆರಡು ಸಾವಿರಗಳು ಮಾತ್ರ)** | **72,000-00** |
| 3 | Effective hearing (5 days) dated, 14-05-2013, 15-05-2013, 21-05-2013, 30-05-2013 & 31-05-2013 @ Rs. 10,000/- per day. | 50,000-00 |
| 4 | Non-effective hearing one day 20-05-2013 @ Rs. 6,000/- per day | 6,000-00 |
| | **ಮೊತ್ತ (ಐವತ್ತಾರು ಸಾವಿರಗಳು ಮಾತ್ರ)** | **56,000-00** |
| | **ಒಟ್ಟು ಮೊತ್ತ (ಒಂದು ಲಕ್ಷದ ಇಪ್ಪತ್ತೆಂಟು ಸಾವಿರಗಳು ಮಾತ್ರ)** | **1,28,000-00** |

1. ಈ ವೆಚ್ಚವನ್ನು ಶೀರ್ಷಿಕೆ **"2070–00–105–0–02–059 ವಿಶೇಷ ತನಿಖಾ ಆಯೋಗಗಳು"** ಅಡಿಯಲ್ಲಿ ಭರಿಸತಕ್ಕದ್ದು. ಸದರಿ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬಿಡುಗಡೆಯಾದ ಹಣವನ್ನು ಹಿಂಪಡೆದು ವಿತರಿಸಲು ಸರ್ಕಾರದ ಅಧೀನ ಕಾರ್ಯದರ್ಶಿ (ಕಾನೂನು ಮತ್ತು ಸುವ್ಯವಸ್ಥೆ), ಒಳಾಡಳಿತ ಇಲಾಖೆ ಇವರನ್ನು ಹಣ ಹಿಂಪಡೆಯುವ ಮತ್ತು ವಿತರಿಸುವ ಅಧಿಕಾರಿಯನ್ನಾಗಿ ನೇಮಿಸಲಾಗಿದೆ.
2. ಈ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ : ಆಇ 3 ಟಿಎಫ್‌ಪಿ 2011, ದಿನಾಂಕ : 27–01–2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಕಾಶ ವೈ. ಕೆ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

P.R. 686

SC - 50

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಗಂಗಾ ಕಲ್ಯಾಣ ಯೋಜನೆಯಡಿ ವೈಯಕ್ತಿಕ ಕೊಳವೆಬಾವಿಗೆ ನಿಗಧಿಪಡಿಸಿದ ಘಟಕ ವೆಚ್ಚವನ್ನು ಹೆಚ್ಚಿಸುವ ಬಗ್ಗೆ

**ಉಲ್ಲೇಖ :**
1. ಸರ್ಕಾರದ ಆದೇಶ ಸಂಖ್ಯೆ: ಸಕಇ 152 ಎಸ್‌ಡಿಸಿ 2002, ದಿನಾಂಕ: 06–06–2002
2. ಸರ್ಕಾರದ ಆದೇಶ ಸಂಖ್ಯೆ: ಸಕಇ 48 ಎಸ್‌ಡಿಸಿ 2008, ದಿನಾಂಕ: 12–11–2010
3. ಏಕಕಡತದ ಸಂಖ್ಯೆ: ಡಾ॥ ಬಿಆರ್‌ಅಂನಿ/ಗಂಕಯೋ/34/2012–13, ದಿನಾಂಕ: 17–11–2012

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1) ರ ಆದೇಶದಲ್ಲಿ ಡಾ॥ ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ, ಅನುಷ್ಠಾನಗೊಳಿಸುತ್ತಿರುವ ಗಂಗಾ ಕಲ್ಯಾಣ ವೈಯಕ್ತಿಕ ನೀರಾವರಿ ಕೊಳವೆಬಾವಿಗಳ ಘಟಕ ವೆಚ್ಚವನ್ನು ರೂ. 75,000/–ದಿಂದ ರೂ. 1.00 ಲಕ್ಷಕ್ಕೆ ಹೆಚ್ಚಿಸಲಾಗಿದೆ. ಇದರಲ್ಲಿ ಸಹಾಯಧನ ರೂ. 86,000/– ಮತ್ತು ಉಳಿದ ರೂ. 14,000/– ಸಾಲದ ರೂಪದಲ್ಲಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (2) ರ ಆದೇಶದಲ್ಲಿ ಡಾ॥ ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ, ಕರ್ನಾಟಕ ಪರಿಶಿಷ್ಠ ವರ್ಗಗಳ ಅಭಿವೃದ್ಧಿ ನಿಗಮ, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮಗಳು ಅನುಷ್ಠಾನಗೊಳಿಸುತ್ತಿರುವ ಗಂಗಾ ಕಲ್ಯಾಣ ಯೋಜನೆಯಡಿ ವೈಯಕ್ತಿಕ ನೀರಾವರಿ ಕೊಳವೆ ಬಾವಿ/ತೆರೆದ ಬಾವಿಗಳ ಘಟಕ ವೆಚ್ಚವನ್ನು ರೂ. 86,000/– ದಿಂದ ರೂ. 1.00 ಲಕ್ಷಕ್ಕೆ ಹೆಚ್ಚಿಸಲು ಮತ್ತು ಸಾಲವನ್ನು ರೂ. 50,000/– ವರೆಗೆ ಅಥವಾ ಸಹಾಯಧನಕ್ಕಿಂತ ಹೆಚ್ಚಿಗೆ ತಗಲುವ ವೆಚ್ಚ ಎರಡರಲ್ಲಿ ಯಾವುದು ಕಡಿಮೆಯೋ ಅದನ್ನು ಸಂಬಂಧಪಟ್ಟ ನಿಗಮಗಳಿಂದ ನೀಡಲು ಆದೇಶಿಸಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (3) ರ ಪ್ರಸ್ತಾವನೆಯಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಡಾ॥ ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ಇವರು ಡಾ॥ ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ಹಾಗೂ ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಠ ಪಂಗಡಗಳ ಅಭಿವೃದ್ಧಿ ನಿಗಮಗಳಿಂದ, ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ವರ್ಗದ ಸಣ್ಣ ಮತ್ತು ಅತಿ ಸಣ್ಣ ರೈತರ ಖುಷ್ಕಿ ಜಮೀನುಗಳಿಗೆ ನೀರಾವರಿ ಸೌಲಭ್ಯವನ್ನು ಒದಗಿಸಲು ಗಂಗಾ ಕಲ್ಯಾಣ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿದ್ದು, ಈಗಿರುವ ಘಟಕ ವೆಚ್ಚದಲ್ಲಿ ರೂ. 1.00 ಲಕ್ಷಗಳ ಸಹಾಯಧನವಿದ್ದು, ರೂ. 50,000/– ಅವಧಿಸಾಲವಿರುತ್ತದೆ. ಕೊಳವೆ ಬಾವಿ ನಿರ್ಮಾಣದ ವೆಚ್ಚವು ಡೀಸೆಲ್, ಉಕ್ಕು ಮತ್ತು ತಾಮ್ರದ ಬೆಲೆಗಳ ಮೇಲೆ ನೇರ ಸಂಬಂಧ ಹೊಂದಿರುತ್ತದೆ. ಇತ್ತೀಚಿನ ದಿನಗಳಲ್ಲಿ ಕಚ್ಚಾ ಸಾಮಗ್ರಿಗಳ ಬೆಲೆಗಳು ಒಂದೇ ಸಮನೆ ಏರಿಕೆಯಾಗುತ್ತಿರುವುದರಿಂದ ವೈಯಕ್ತಿಕ ನೀರಾವರಿ ಕೊಳವೆಬಾವಿಗಳಿಗೆ ಸರ್ಕಾರ ನಿಗಧಿಪಡಿಸಿರುವ ಘಟಕ ವೆಚ್ಚ ರೂ. 1.50 ಲಕ್ಷದಲ್ಲಿ ಘಟಕ ಪೂರ್ಣಗೊಳಿಸಲು ಸಾಧ್ಯವಾಗುತ್ತಿಲ್ಲ. ಗಂಗಾ ಕಲ್ಯಾಣ ಯೋಜನೆಯಡಿ ಕೊರೆಯಲಾಗುವ ಕೊಳವೆಬಾವಿಗಳ ಆಳ ಸಾಮಾನ್ಯವಾಗಿ 120 ಮೀಟರ್‌ನಿಂದ 250 ಮೀಟರ್‌ವರೆಗೆ ಇರುತ್ತದೆ. ಇತರೆ ಇಲಾಖೆಗಳಾದ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಮತ್ತು ಬೆಂಗಳೂರು ನೀರು ಸರಬರಾಜು ಹಾಗೂ ಒಳಚರಂಡಿ ಮಂಡಳಿ (RDPR & BWSSB) ಗಳು ಅಳವಡಿಸಿಕೊಂಡಿರುವ ಎಸ್.ಆರ್. ದರಗಳಂತೆ ಲೆಕ್ಕಾಚಾರ ಮಾಡಲಾಗಿದ್ದು, ಒಂದು ಕೊಳವೆಬಾವಿ ಘಟಕಕ್ಕೆ ಸರಾಸರಿ ರೂ. 2.28 ಲಕ್ಷ ತಗಲುತ್ತದೆ. ಆದುದರಿಂದ ಪ್ರಸ್ತುತ ಇರುವ ಘಟಕ ವೆಚ್ಚದ ಮಿತಿಯನ್ನು ರೂ. 2.00 ಲಕ್ಷಗಳಿಗೆ ನಿಗಧಿಪಡಿಸಿದಲ್ಲಿ ಫಲಾನುಭವಿಗೆ ಹೆಚ್ಚಿನ ಹೊರೆಯಿಲ್ಲದೇ ಘಟಕವನ್ನು ಸೃಜಿಸಿ ಪೂರ್ಣಗೊಳಿಸಲು ಅನುಕೂಲವಾಗುತ್ತದೆ. ಈ ರೀತಿಯ ಹೆಚ್ಚಳದಿಂದ ಬೇಕಾಗುವ ಮೊತ್ತವನ್ನು ಗಂಗಾ ಕಲ್ಯಾಣ ಯೋಜನೆಗೆ ರಾಜ್ಯ ಆಯವ್ಯಯದಲ್ಲಿ ನಿಗಮಗಳಿಗೆ ಒದಗಿಸುವ ಹಣದಿಂದ ಭರಿಸಲಾಗುವುದು. ಪ್ರಯುಕ್ತ ಪ್ರಸ್ತುತ ಇರುವ ಘಟಕ ವೆಚ್ಚವನ್ನು ರೂ. 1.50 ಲಕ್ಷಗಳಿಂದ ರೂ. 2.00 ಲಕ್ಷಕ್ಕೆ ಹೆಚ್ಚಿಸುವಂತೆ ಕೋರಿರುತ್ತಾರೆ.

2013–14ನೇ ಆಯವ್ಯಯದಲ್ಲಿ ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡದ ಫಲಾನುಭವಿಗಳಿಗೆ ಗಂಗಾ ಕಲ್ಯಾಣ ಯೋಜನೆಯ ಅಡಿಯಲ್ಲಿ ಘಟಕ ವೆಚ್ಚವನ್ನು ರೂ. 2.00 ಲಕ್ಷಗಳಿಗೆ ಹೆಚ್ಚಳ ಮಾಡಲು ಪ್ರಸ್ತಾಪಿಸಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 243 ಎಸ್‌ಡಿಸಿ 2012, ಬೆಂಗಳೂರು, ದಿನಾಂಕ: 23ನೇ ಮೇ, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಡಾ॥ ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ ಹಾಗೂ ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಠ ವರ್ಗಗಳ ಅಭಿವೃದ್ಧಿ ನಿಗಮಗಳು ಅನುಷ್ಠಾನಗೊಳಿಸುತ್ತಿರುವ ಗಂಗಾ ಕಲ್ಯಾಣ ವೈಯಕ್ತಿಕ ನೀರಾವರಿ ಕೊಳವೆಬಾವಿಗಳ ಘಟಕವೆಚ್ಚವನ್ನು ರೂ. 1.50 ಲಕ್ಷದಿಂದ ರೂ. 2.00 ಲಕ್ಷಕ್ಕೆ ಹೆಚ್ಚಿಸಿ, ಸರ್ಕಾರ ಮಂಜೂರಾತಿ ನೀಡಿದೆ. ಇದರಲ್ಲಿ ಸಹಾಯಧನ ರೂ. 1.50 ಲಕ್ಷ (ರೂಪಾಯಿ ಒಂದು ಲಕ್ಷ ಐವತ್ತು ಸಾವಿರಗಳು ಮಾತ್ರ) ಮತ್ತು ಉಳಿದ ರೂ. 50,000/– (ರೂಪಾಯಿ ಐವತ್ತು ಸಾವಿರಗಳು ಮಾತ್ರ) ಗಳನ್ನು ಸಾಲದ ರೂಪದಲ್ಲಿ ನೀಡಲಾಗಿದೆ.

ಪರಿಷ್ಕೃತ ದರಗಳು 2013–14ನೇ ಸಾಲಿನಿಂದ ಅನ್ವಯವಾಗುತ್ತದೆ. ಈ ಯೋಜನೆಗೆ ಬೇಕಾಗುವ ವೆಚ್ಚವನ್ನು 2013–14ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿದ ಅನುದಾನದಿಂದ ಭರಿಸತಕ್ಕದ್ದು.

ಮೇಲೆ ಆದೇಶಿಸಿದ ಅಂಶಗಳನ್ನು ಹೊರತು ಪಡಿಸಿ ಗಂಗಾ ಕಲ್ಯಾಣ ಯೋಜನೆಯ ಇತರ ಷರತ್ತುಗಳು ಈ ಮೊದಲಿನಂತೆಯೇ ಅನ್ವಯಿಸುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 886 ವೆಚ್ಚ–3/12, ದಿನಾಂಕ: 01–03–2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರತ್ನಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ–3,

ಸಮಾಜ ಕಲ್ಯಾಣ ಇಲಾಖೆ

**P.R. 681**

**SC - 100**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯದ ವ್ಯಾಪ್ತಿಗೆ ಬರುವ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿನ ಗ್ರೂಪ್–ಎ ಮತ್ತು ಗ್ರೂಪ್–ಬಿ ವೃಂದದ ಅಧಿಕಾರಿಗಳ ಕಾರ್ಯನಿರ್ವಹಣಾ ವರದಿಗಳ ಕುರಿತು ಆದೇಶ

**ಓದಲಾಗಿದೆ:**
1) ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 2 ಎಸಿಆರ್ 93, ದಿನಾಂಕ: 22–02–1994
2) ಕೆ.ಸಿ.ಎಸ್. (ಕಾರ್ಯನಿರ್ವಹಣಾ ವರದಿಗಳ) ನಿಯಮಗಳು 1994ರ ಬಗ್ಗೆ ಮಾರ್ಗಸೂಚಿಗಳು, ದಿನಾಂಕ: 24–05–1994
3) ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಡಿಪಿಎಆರ್ 11 ಸೇರವ 1994, ದಿನಾಂಕ: 03–10–1994
4) ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 12 ಸೇರವ 1994, ದಿನಾಂಕ: 21–12–1994
5) ಸುತ್ತೋಲೆ ಸಂಖ್ಯೆ: ಸಿಆಸುಇ 3 ಸೇರವ 1996, ದಿನಾಂಕ: 31–03–1997
6) ಸುತ್ತೋಲೆ ಸಂಖ್ಯೆ: ಸಿಆಸುಇ 7 ಸೇರವ 1997, ದಿನಾಂಕ: 23–10–1997
7) ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಸಿಆಸುಇ 6 ಎಸಿಆರ್ 1997, ದಿನಾಂಕ: 29–07–2000

**ಪ್ರಸ್ತಾವನೆ:**

ಮೇಲೆ ಓದಲಾದ ಅಧಿಸೂಚನೆ, ಅಧಿಕೃತ ಜ್ಞಾಪನ ಮತ್ತು ಸುತ್ತೋಲೆಗಳಲ್ಲಿ ರಾಜ್ಯ ಸರ್ಕಾರವು ರಾಜ್ಯದಲ್ಲಿನ ವಿವಿಧ ಅಧಿಕಾರಿ/ನೌಕರರ ಕಾರ್ಯನಿರ್ವಹಣಾ ವರದಿಗಳನ್ನು ಆಯಾ ವರ್ಷಗಳಲ್ಲಿ ತಯಾರು ಮಾಡುವ, ವರದಿ ಮಾಡುವ, ಪರಿಶೀಲನೆ ಮಾಡುವ ಮತ್ತು ಅಂಗೀಕರಿಸುವ ಪ್ರಾಧಿಕಾರಗಳನ್ನು ರೂಪಿಸುವ ಬಗ್ಗೆ ಸೂಕ್ತ ಸೂಚನೆ ಮತ್ತು ಮಾರ್ಗದರ್ಶನಗಳನ್ನು ನೀಡಿದೆ. ಆಡಳಿತ ಇಲಾಖೆಯ ವ್ಯಾಪ್ತಿಗೆ ಒಳಪಡುವ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಗ್ರೂಪ್–ಎ ಮತ್ತು ಗ್ರೂಪ್–ಬಿ ವೃಂದದ ಅಧಿಕಾರಿಗಳಿಗೆ ಸರ್ಕಾರವು ನೇಮಕಾತಿ ಪ್ರಾಧಿಕಾರಿಯಾಗಿರುವುದರಿಂದ ಅಂತಹ ಅಧಿಕಾರಿಗಳಿಗೆ ಸಂಬಂಧಿಸಿದಂತೆ ಕಾರ್ಯನಿರ್ವಹಣಾ ವರದಿಗಳ ಹಾಗೂ ರಕ್ಷಣೆಯ ಜವಾಬ್ದಾರಿಯ ಬಗ್ಗೆ ಕ್ರಮ ಜರುಗಿಸಬೇಕಾಗಿದೆ.

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ವರದಿ ಮಾಡುವ ಪರಿಶೀಲಿಸುವ ಅಂಗೀಕರಿಸುವ ಮತ್ತು ಅಂತಹ ಗೌಪ್ಯ ವರದಿಗಳನ್ನು ಆಚರಣೆಯಲ್ಲಿರುವಂತಹ ವ್ಯವಸ್ಥೆ ಬಗ್ಗೆ ಆದೇಶಗಳು ಈ ಇಲಾಖೆಯಿಂದ ಜಾರಿ ಮಾಡದೆ ಇರುವುದರಿಂದ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹಿಂವಕ 270 ಬಿಇಟಿ 2013, ಬೆಂಗಳೂರು ದಿನಾಂಕ: 24ನೇ ಮೇ, 2013**

ಸರ್ಕಾರವು ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಕಾರ್ಯನಿರ್ವಹಣಾ ವರದಿಗಳ ಬಗ್ಗೆ ಜಾರಿಗೊಳಿಸಬೇಕಾದ ಸೂಚ್ಯಾದೇಶಗಳ ಅನ್ವಯ ಈ ಕೆಳಕಂಡಂತೆ ವರದಿ ಮಾಡುವ, ಪರಿಶೀಲನೆ ಮಾಡುವ, ಅಂಗೀಕರಿಸುವ ಮತ್ತು ಅಭಿರಕ್ಷಣೆಯ ಪ್ರಾಧಿಕಾರಿಗಳನ್ನು ಗುರುತಿಸಿ ನೇಮಿಸಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆ | ವರದಿ ಮಾಡುವ ಪ್ರಾಧಿಕಾರ | ಪರಿಶೀಲನಾ ಪ್ರಾಧಿಕಾರ | ಅಂಗೀಕರಿಸುವ ಪ್ರಾಧಿಕಾರ | ಅಭಿರಕ್ಷಣೆಯ ಪ್ರಾಧಿಕಾರ |
|---|---|---|---|---|---|
| 1) | ಜಂಟಿ ನಿರ್ದೇಶಕರು | ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಪ್ರಧಾನ ಕಾರ್ಯದರ್ಶಿ /ಕಾರ್ಯದರ್ಶಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಗಳು |
| 2) | ಉಪ ನಿರ್ದೇಶಕರು | ಜಂಟಿ ನಿರ್ದೇಶಕರು | ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ ಹಿಂದುಳಿದ ವರ್ಗಗಳ | ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ |

| ಕ್ರ.ಸಂ. | ಹುದ್ದೆ | ವರದಿ ಮಾಡುವ ಪ್ರಾಧಿಕಾರ | ಪರಿಶೀಲನಾ ಪ್ರಾಧಿಕಾರ | ಅಂಗೀಕರಿಸುವ ಪ್ರಾಧಿಕಾರ | ಅಭಿರಕ್ಷಣೆಯ ಪ್ರಾಧಿಕಾರ |
|---|---|---|---|---|---|
| | | | | ಕಲ್ಯಾಣ ಇಲಾಖೆ | |
| 3) | ಹಿಂದುಳಿದ ವರ್ಗಗಳ ಸಹಾಯಕ ನಿರ್ದೇಶಕರು | ಜಂಟಿ ನಿರ್ದೇಶಕರು | ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ |
| 4) | ಪತ್ರಾಂಕಿತ ವ್ಯವಸ್ಥಾಪಕರು | ಸಂಬಂಧಿಸಿದ ಸಹಾಯಕ ನಿರ್ದೇಶಕರು (ಆಡಳಿತ) | ಉಪ ನಿರ್ದೇಶಕರು (ಕೇಂದ್ರ ಸ್ಥಾನ) | ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ |
| 5) | ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿ | ಸಿ.ಇ.ಓ. ಜಿಲ್ಲಾ ಪಂಚಾಯತ್ | ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ |

ಮೇಲ್ಕಂಡಂತೆ ಸೂಚಿಸಲಾದ ಸಂಬಂಧಿಸಿದ ಅಧಿಕಾರಿಗಳು ಪ್ರತಿ ವರ್ಷ ಕರ್ನಾಟಕ ನಾಗರೀಕ ಸೇವೆಗಳು (ಕಾರ್ಯನಿರ್ವಹಣೆ ವರದಿಗಳು) 1994ರನ್ವಯ ಅವರಿಗೆ ಸಂಬಂಧಿಸಿದಂತೆ ನಿಗದಿಪಡಿಸಲಾದ ನಮೂನೆಯಲ್ಲಿ ವೈಯಕ್ತಿಕ ಮಾಹಿತಿ, ನಮೂದಿಸಿ ಸಹಿ, ಪೂರ್ಣ ವಿಳಾಸ, ಪದನಾಮ, ಮೊಹರು ಹಾಗೂ ದಿನಾಂಕಗಳನ್ನು ತಪ್ಪದೇ ನಮೂದಿಸಿ ಹಾಗೂ ಸ್ವಯಂ ಮೌಲ್ಯಮಾಪನ ಭರ್ತಿ ಮಾಡಿ, ಏಪ್ರಿಲ್ ತಿಂಗಳ 10ನೇ ತಾರೀಖಿನೊಳಗೆ ವೈಯಕ್ತಿಕವಾಗಿ ಸಲ್ಲಿಸಿ ಅವರಿಂದ ಸ್ವೀಕೃತಿ ಪಡೆದು ಇರಿಸಿಕೊಳ್ಳತಕ್ಕದ್ದು. ಈ ರೀತಿ ಮಾಹಿತಿ ಒದಗಿಸದ ಅಧಿಕಾರಿಯ ಬಗ್ಗೆ ಸರ್ಕಾರಕ್ಕೆ ಶಿಫಾರಸ್ಸು ಮಾಡತಕ್ಕದ್ದು. ಇದಾದ ನಂತರ ಪರಿಶೀಲನಾ ಪ್ರಾಧಿಕಾರ ನಿಯಮಾನುಸಾರ ಪರಿಶೀಲನೆ ಮಾಡಿ, ಅಂಗೀಕಾರ ಪ್ರಾಧಿಕಾರಕ್ಕೆ ರವಾನಿಸತಕ್ಕದ್ದು. ಅಂಗೀಕೃತವಾದ ನಂತರ ಅಭಿರಕ್ಷಣೆಯ ಪ್ರಾಧಿಕಾರಕ್ಕೆ ರವಾನಿಸತಕ್ಕದ್ದು. ಗ್ರೂಪ್–ಸಿ ಮತ್ತು ಗ್ರೂಪ್–ಬಿ ವೃಂದದ ಅಧಿಕಾರಿಗಳ ಪ್ರತಿ ವರ್ಷದ "ಗೌಪ್ಯ ವರದಿ" ಆಯಾಯ ಪ್ರಾಧಿಕಾರದ ಅಭಿರಕ್ಷಣೆಯಲ್ಲಿರತಕ್ಕದ್ದು.

ಮೇಲ್ಕಂಡ ಪ್ರಕ್ರಿಯೆಯು ಕಾಲಮಿತಿಗೆ ಒಳಪಟ್ಟು ಸಾಂಗೋಪಸಾಂಗವಾಗಿ ಕಾರ್ಯನಿರ್ವಹಣೆ ಜವಾಬ್ದಾರಿಯನ್ನು ಇಲಾಖೆಯ ಆಯುಕ್ತರು/ ನಿರ್ದೇಶಕರುಗಳಿಗೆ ವಹಿಸಿಕೊಡಲಾಗಿದೆ. ಪ್ರಕ್ರಿಯೆಯಲ್ಲಿ ಏನಾದರೂ ಪ್ರತಿಕೂಲಗಳು ಕಂಡು ಬಂದಲ್ಲಿ ಇಲಾಖೆಯ ಆಯುಕ್ತರು/ನಿರ್ದೇಶಕರನ್ನು ಹೊಣೆಗಾರರನ್ನಾಗಿ ಮಾಡಿ ಶಿಸ್ತಿನ ಕ್ರಮ ಜರುಗಿಸಲಾಗುವುದೆಂಬ ಷರತ್ತಿಗೊಳಪಟ್ಟು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆಜಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ–1 (ಪ್ರ),

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**P.R. 682**

**SC - 500**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಹೆಚ್. ಉಮಾಶಂಕರ್, ಪಿ.ಎಸ್.ಐ., ಜಿಗಣಿ ಪೊಲೀಸ್ ಠಾಣೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ : ಪನ್ನಿ/61/ಡಿಇ/09–10 (ಓ.ಬಿ. ಸಂಖ್ಯೆ : 99/2011–12) ದಿನಾಂಕ : 12–01–2012.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಇವರ ಆದೇಶ ಸಂಖ್ಯೆ : ಅಪೀಲು(4)1/2012–13, (ಓ.ಬಿ. ಸಂಖ್ಯೆ : 31/2012–13), ದಿನಾಂಕ : 02–08–2012.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 26–11–2012.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)59/2012–13, ದಿನಾಂಕ : 21–01–2013.

**ಪ್ರಸ್ತಾವನೆ :**

ಶ್ರೀ ಹೆಚ್. ಉಮಾಶಂಕರ್, ಪಿ.ಎಸ್.ಐ., ಇವರು ಹೆಬ್ಬೂರು ಪೊಲೀಸ್ ಠಾಣೆ ತುಮಕೂರು ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :–**

1. "ದಿನಾಂಕ : 19–09–2009 ರಂದು ಶ್ರೀಮತಿ ನಾಗರತ್ನ ಎಂಬುವವರನ್ನು ಲಕ್ಷ್ಮಿಪುರ ಆಕೆಯ ಗಂಡ ಚನ್ನೇಗೌಡ ಮತ್ತು ಆತನ ಮನೆಯವರು ಕಿರುಕುಳ ನೀಡಿ ನಾಪತ್ತೆ ಮಾಡಿದ್ದಾರೆಂದು ಅದೇ ದಿನ ಆಕೆಯ ಅಣ್ಣ ಗಂಗರಾಜು ಮತ್ತು ಅವರ ತಂದೆ ಪುಟ್ಟ ಹನುಮಯ್ಯ ಎಂಬುವವರು ಚನ್ನೇಗೌಡ ಮತ್ತು ಅವರ ಕಡೆಯವರ ಮೇಲೆ ದೂರು ನೀಡಲು ಹೆಬ್ಬೂರು ಪೊಲೀಸ್ ಠಾಣೆಗೆ ಬಂದಾಗ ನೀವು ಅವರನ್ನು ಸೌಜನ್ಯದಿಂದ ನಡೆದುಕೊಳ್ಳದೆ ಅಮಾನುಷವಾಗಿ ವರ್ತಿಸಿ ನಿಮ್ಮ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

2. ಇದೇ ವಿಚಾರದ ಬಗ್ಗೆ ಸದರಿಯವರಿಗೆ ದಿನಾಂಕ : 19–09–2009 ರಿಂದ 21–09–2009 ರವರೆಗೆ ಅಲೆದಾಡಿಸಿ ಪಿರ್ಯಾದನ್ನು ತೆಗೆದುಕೊಳ್ಳದೆ ತಿರಸ್ಕರಿಸಿ ಬೇಜವಾಬ್ದಾರಿತನ ತೋರಿರುತ್ತೀರಿ.

3. ಮೇಲಿನ ವಿಚಾರದ ಬಗ್ಗೆ ಬೇಸತ್ತ ಅರ್ಜಿದಾರರು ನಂತರ ಗ್ರಾಮಸ್ಥರ ಮುಖೇನ ಪುನಃ ಅರ್ಜಿ ನೀಡಲು ಠಾಣೆಗೆ ಬಂದಾಗಲೂ ಸಹ ಗ್ರಾಮಸ್ಥರಿಗೆ ಮತ್ತು ಅರ್ಜಿದಾರರಿಗೆ ಅವಾಚ್ಯ ಶಬ್ದಗಳಿಂದ ಬೈದು, ಈ ಪ್ರಕರಣ ದಾಖಲಿಸಲು ನನಗೆ ರಾಜಕೀಯ ಒತ್ತಡವಿದೆ ಎಂದು ತಮ್ಮ ಅಸಹಾಯಕತೆ ತೋರಿರುತ್ತೀರಿ.

4. ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ಅರ್ಜಿದಾರರು ತನ್ನ ಮಗಳನ್ನು ಹುಡುಕಿಕೊಡುವಂತೆ ಅಂಗಲಾಚಿ ಬೇಡಿಕೊಂಡರೂ ಅವರ ಕಷ್ಟಕ್ಕೆ ಸ್ಪಂದಿಸದೆ, ಅವರು ನೀಡಿದ ದೂರನ್ನು ಪಡೆಯದೇ, ಮಿಸ್ಸಿಂಗ್‌ಗೆ ಬರೆದುಕೊಟ್ಟರೆ ತೆಗೆದುಕೊಳ್ಳುತ್ತೇನೆ. ಇಲ್ಲವಾದರೆ ಲೋಫರ್ ನನ್ ಮಕ್ಕಳಾ ನಿಮ್ಮ ಮೇಲೆ ಕೇಸು ಬುಕ್ ಮಾಡುತ್ತೇನಂತಾ ಅವಾಚ್ಯ ಶಬ್ದಗಳಿಂದ ಬೈದು ಠಾಣೆಯಿಂದ ಹೊರಹೋಗಿದ್ದು, ನಿಮ್ಮ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

5. ತದನಂತರ ಮೇಲಿನ ವಿಚಾರದ ಬಗ್ಗೆ ದಿನಾಂಕ : 22–09–2009 ರಂದು ಅರ್ಜಿದಾರರು ಗ್ರಾಮಾಸ್ಥರೊಂದಿಗೆ ಠಾಣೆಗೆ ಬಂದಾಗ ಆ ಸಮಯದಲ್ಲಿ ಆರೋಪಿಗಳು ಠಾಣೆಯಲ್ಲೇ ಇದ್ದರೂ ಸಹ ಅವರನ್ನು ವಿಚಾರ ಮಾಡದೆ ಅರ್ಜಿದಾರರ ಮುಂದೆಯೇ ಆರೋಪಿಗಳನ್ನು ನೀವು ಕಳುಹಿಸಿಕೊಟ್ಟಿದ್ದರಿಂದ ಗ್ರಾಮಸ್ಥರು ಈ ಪ್ರಕರಣವನ್ನು ದಾಖಲಿಸದಿದ್ದರೆ ಇಲ್ಲೇ ಕುಳಿತುಕೊಳ್ಳುತ್ತೇವೆಂದು ಠಾಣೆಯ ಮುಂದೆ ಕುಳಿತ ನಂತರ ಮೊಕದ್ದಮೆ ಸಂ. 144/09 ರಲ್ಲಿ ಪ್ರಕರಣವನ್ನು ದಾಖಲಿಸಿ ಅತೀವ ನಿರ್ಲಕ್ಷ್ಯತೆ ತೋರಿರುತ್ತೀರಿ.

6. ಹೆಬ್ಬೂರು ಪೊಲೀಸ್ ಠಾಣಾ ಮೊಕದ್ದಮೆ ಸಂ. 125/09 ರ ಪ್ರಕರಣದಲ್ಲಿ ಆರೋಪಿಗಳನ್ನು ಪತ್ತೆಮಾಡಲು ಯಾವುದೇ ಪ್ರಾಮಾಣಿಕ ಪ್ರಯತ್ನ ಮಾಡದೇ ಕಾಟಾಚಾರದ ತನಿಖೆ ನಡೆಸಿ ಆರೋಪಿಗಳಿಗೆ ಶಿಕ್ಷೆ ತಪ್ಪಿಸುವ ಉದ್ದೇಶದಿಂದ ದೋಷಾರೋಪಣೆ ಪತ್ರದಲ್ಲಿ ಆರೋಪಿಗಳ ಹೆಸರು ವಿಳಾಸವನ್ನು ಸ್ಪಷ್ಟವಾಗಿ ನಮೂದಿಸದೆ, ಈ ಪ್ರಕರಣ ಎಲ್.ಪಿ.ಆರ್. ಆಗಲು ಕಾರಣರಾಗಿತ್ತೀರಿ. ಈ ಬಗ್ಗೆ ತುಮಕೂರು ನಗರ ಡಿವೈ.ಎಸ್.ಪಿ. ರವರು ಮೆಮೋ ನೀಡಿದರೂ ನೀವು ಉತ್ತರಿಸದೆ ಕರ್ತವ್ಯ ನಿರ್ಲಕ್ಷ್ಯ ತೋರಿರುತ್ತೀರಿ.

7. ದಿನಾಂಕ : 22–08–2009 ರಂದು ವರದಿಯಾದ ಹೆಬ್ಬೂರು ಠಾಣೆ ಮೊ.ನಂ. 131/09ರ ಪ್ರಕರಣದಲ್ಲಿ ಆರೋಪಿಯಾದ ಜಯಲಕ್ಷ್ಮಮ್ಮ ಎಂಬುವವರನ್ನು ದಸ್ತಗಿರಿ ಮಾಡದೆ ಎಫ್.ಎಸ್.ಎಲ್. ವರದಿಯನ್ನು ಪಡೆಯದೆ ಒಂದೇ ದಿನದಲ್ಲಿ ಅಂದರೆ 23–8–2009 ರಂದು ಘನ ನ್ಯಾಯಾಲಯಕ್ಕೆ ದೋಷಾರೋಪಣ ಪಟ್ಟಿಯನ್ನು ಸಲ್ಲಿಸಿ ಕರ್ತವ್ಯ ನಿರ್ಲಕ್ಷ್ಯತೆ ತೋರಿತ್ತೀರಿ.

8. ಹೆಬ್ಬೂರು ಪೊಲೀಸ್ ಠಾಣಾ ಮೊಕದ್ದಮೆ ಸಂ. 99/09ರ ಪ್ರಕರಣದಲ್ಲಿ 'ಬಿ' ಅಂತಿಮ ವರದಿಯನ್ನು ಘನ ನ್ಯಾಯಾಲಯಕ್ಕೆ ಸಲ್ಲಿಸಲು ಅನುಮತಿ ಕೋರಿದ್ದು, ಈ ಬಗ್ಗೆ ತುಮಕೂರು ನಗರ, ಡಿವೈ.ಎಸ್.ಪಿ. ರವರು ತನಿಖೆಯನ್ನು ಮುಂದುವರೆಸಿ ಮರುನಿವೇದಿಸಿಕೊಳ್ಳುವಂತೆ ಜ್ಞಾಪನ ಪತ್ರ ನೀಡಿದ್ದು, ಸದರಿ ಜ್ಞಾಪನ ಪತ್ರವನ್ನು ಪಡೆದ ನೀವು ತಮ್ಮ ಆದೇಶವನ್ನು ತಿಳಿದುಕೊಂಡಿರುತ್ತೇನೆ. ತನಿಖೆ ಮುಂದುವರೆಸಿ ವರದಿ ಸಲ್ಲಿಸುವುದಾಗಿ ನಮೂದಿಸಿ ಉತ್ತರವನ್ನು ನಿವೇದಿಸಿಕೊಂಡಿದ್ದು, ತನಿಖೆಯನ್ನು ಮುಂದುವರೆಸಲು ಮೇಲಾಧಿಕಾರಿಯವರ ಆದೇಶವನ್ನು ಪಾಲಿಸದೆ ಹಿಂದಿನ ಪಿ.ಎಸ್.ಐ. ರವರೇ ತನಿಖೆ ನಡೆಸಿದ 'ಬಿ' ಅಂತಿಮ ವರದಿಯನ್ನು ಪುನಃ ಸಲ್ಲಿಸಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ತೋರಿರುತ್ತೀರಿ".

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಇವರ ವಿರುದ್ಧದ 08 ಆರೋಪಗಳಲ್ಲಿ 05 ಆರೋಪಗಳು ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ದಿನಾಂಕ : 12–01–12ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ದಕ್ಕೆಯಾಗುವಂತೆ ಮೂರು ವರ್ಷಗಳ ಕಾಲ ಮುಂದೂಡಲಾಗಿದೆ ಹಾಗೂ ದಿನಾಂಕ : 07–11–2009 ರಿಂದ 29–12–2009ರ ವರೆಗೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ : 02–08–2012ರ ಆದೇಶದಲ್ಲಿ ತಿರಸ್ಕರಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಕರ್ತವ್ಯದಲ್ಲಿ ನಿರ್ಲಕ್ಷ್ಯತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 134 ಪೊಸಿಅ 2012, ಬೆಂಗಳೂರು, ದಿನಾಂಕ : 12–06–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್. ಉಮಾಶಂಕರ್, ಪಿ.ಎಸ್.ಐ. ಜಿಗಣಿ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

P.R. 687

SC - 30

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಜಿ. ತಮ್ಮಣ್ಣ, ನಿವೃತ್ತ ಸಿಹೆಚ್‌ಸಿ 179, ಬಿಂಡಿಗನವಿಲೆ ಪೊಲೀಸ್ ಠಾಣೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ : ಸಿಬ್ಬಂದಿ(2)/ಡಿಇ/14/2010–11 (ಓ.ಬಿ. ಸಂಖ್ಯೆ : 134/2011–12) ದಿನಾಂಕ :09–08–2011.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ : ಅಪೀಲು(41)/2011–12, (ಓ.ಬಿ. ಸಂಖ್ಯೆ : 58/2011–12), ದಿನಾಂಕ : 12–03–2012.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 06–09–2012.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)31/2012–13, ದಿನಾಂಕ : 02–11–2012 ಮತ್ತು 14–02–2013.

**ಪ್ರಸ್ತಾವನೆ :**

ಶ್ರೀ ಜಿ. ತಮ್ಮಣ್ಣ, ಸಿಹೆಚ್‌ಸಿ 179, ಇವರು ಬಿಂಡಿಗನವಿಲೆ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಕರ್ತವ್ಯಕ್ಕೆ ಗೈರುಹಾಜರಾಗಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :–**

"ಶ್ರೀ ಜಿ. ತಮ್ಮಣ್ಣ, ನಿವೃತ್ತ ಸಿಹೆಚ್‌ಸಿ 179, ಇವರು ಬಿಂಡಿಗನವಿಲೆ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು. ದಿನಾಂಕ : 23–04–2010 ರಿಂದ ಮೇಲಾಧಿಕಾರಿಗಳ ಅನುಮತಿಯಿಲ್ಲದೆ ಅಥವಾ ಯಾವುದೇ ರಜಾ ಅರ್ಜಿಯನ್ನು ಸಲ್ಲಿಸದೆ ತಮ್ಮ ಇರುವಿಕೆಯ ಬಗ್ಗೆ ಯಾವುದೇ ಮಾಹಿತಿಯನ್ನು ನೀಡದೇ 21 ದಿನಗಳಿಗೂ ಮೀರಿ ಕರ್ತವ್ಯಕ್ಕೆ ಗೈರುಹಾಜರಾಗಿದ್ದು, ಪಿ.ಎಸ್.ಐ., ಬಿಂಡಿಗನವಿಲೆ ಪೊಲೀಸ್ ಠಾಣೆಯವರ ವರದಿಯ ಆಧಾರದ ಮೇಲೆ ನಿಮಗೆ ಪೊಲೀಸ್ ಮ್ಯಾನುಯಲ್ ಆದೇಶ ಸಂಖ್ಯೆ : 525ರ ಪ್ರಕಾರ ಕರ್ತವ್ಯಕ್ಕಾಗಿ ಸೂಚನಾ ಪತ್ರವನ್ನು ಸಂಖ್ಯೆ : ಸಿಬ್ಬಂದಿ (2) 45/2010–11, ದಿನಾಂಕ : 07–06–10 ರಂದು ಹೊರಡಿಸಿದ್ದು, ನೀವು ಕರ್ತವ್ಯಕ್ಕಾಗಿ ಸೂಚನಾ ಪತ್ರವನ್ನು ದಿನಾಂಕ : 29–06–2010 ರಂದು ಸ್ವೀಕರಿಸಿದ್ದರೂ ಸಹ ಶಿಸ್ತು ಪ್ರಾಧಿಕಾರದ ಮುಂದೆ ಹಾಜರಾಗದೆ ಗೈರುಹಾಜರಿಯನ್ನು ಮುಂದುವರೆಸಿದ್ದು, ನೀವು ಕರ್ತವ್ಯಕ್ಕೆ ಪದೇ ಪದೇ ಗೈರುಹಾಜರಾಗುವ ಪ್ರವೃತ್ತಿವುಳ್ಳವರಾಗಿರುತ್ತೀರಿ. ಇದರಿಂದಾಗಿ ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಸಿಬ್ಬಂದಿಯಾಗಿದ್ದು, ದಿನಾಂಕ : 23–04–10 ರಿಂದ ಇದುವರೆಗೆ ಕರ್ತವ್ಯಕ್ಕೆ ಗೈರುಹಾಜರಾಗಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ, ಬೇಜವಾಬ್ದಾರಿಯುತ ಹಾಗೂ ಅಶಿಸ್ತು ತೋರಿರುತ್ತೀರಿ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ದಿನಾಂಕ : 09–08–2011ರ ಆದೇಶದಲ್ಲಿ ಅರ್ಜಿದಾರರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕಡ್ಡಾಯ ನಿವೃತ್ತಿಗೊಳಿಸಲಾಗಿದೆ. ದಿನಾಂಕ : 23–04–2010 ರಿಂದ 27–10–10ರ ವರೆಗಿನ ಒಟ್ಟು 189 ದಿನಗಳ ಅನಧಿಕೃತ ಗೈರುಹಾಜರಾದ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 106ಎ ಪ್ರಕಾರ ವೇತನ ರಹಿತ ರಜೆ ಎಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 12–03–2012ರ ಆದೇಶದಲ್ಲಿ ತಿರಸ್ಕರಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಷರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 94 ಪೊಸಿಅ 2012, ಬೆಂಗಳೂರು, ದಿನಾಂಕ : 11–06–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ. ತಮ್ಮಣ್ಣ, ನಿವೃತ್ತ ಸಿಹೆಚ್‌ಸಿ 179, ಬಿಂಡಿಗನವಿಲೆ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**P.R. 688**

**SC - 30**

## COMMERCE AND INDUSTRIES SECRETARIAT

**SUB :** Constituting Manufacturing Task Force-reg.

**READ :** Proposal from Commissioner for Industrial Development and Director of Industries and Commerce, Bangalore dated : 26-09-2012.

**PREAMBLE :**

The Commissioner for Industrial Development and Director of Industries and Commerce, in his proposal read above has stated that, the Government of India has announced a National Manufacturing Policy with an objectives of enhancing the share of manufacturing in GDP from the current level of 16% to 25% and creating employment opportunity for 100 million people in the next ten years. In Karnataka, immense growth is noticed in the manufacturing sector in the last 3 years, though the serve sector is doing quite well. The growth rate in manufacturing sector as per EC survey in Karnataka is still below the national average.

In this connection, constitution of a separate Task Force which can advise Government of Karnataka on the vision of moving ahead in order to promote manufacturing sector is proposed. This proposed Task Force may be headed by \ Mr. Vishwanathan, Former Managing Director, BOSCH and the senior officers & representative from leading industries may be nominated as its members :-

Government has examined the proposal and hence the following order.

**GOVERNMENT ORDER NO. CI 71 SPI 2013, BANGALORE, DATED : 14-06-2013.**

In the circumstances explained in the preamble, Government is pleased to constitute Manufacturing Task Force of Karnataka as follows :

| | | |
|---|---|---|
| 1. | Mr. Vishwanathan, Former Managing Director, BOSCH | Chairman |
| 2. | Mr. Vikram Kirloskar of Toyota | Vice-Chairman |
| 3. | Principal Secretary to Govt. Commerce and Industries Department | Member |
| 4. | Principal Secretary to Govt. Department of Labour Welfare | Member |

| | | |
|---|---|---|
| 5. | Principal Secretary to Govt. Department of Energy | Member |
| 6. | Principal Secretary to Govt. Department of Finance | Member |
| 7. | Principal Secretary to Govt. Department of Revenue | Member |
| 8. | Chairman & Managing Director of Ingersoll Rand | Member |
| 9. | Mr. L. Krishnan, Present Karnataka CII Chairman | Member |
| 10. | President, FKCCI | Member |
| 11. | President, BCIC | Member |
| 12. | Mr. Philip Divri, Managing Director, Volvo | Member |
| 13. | Mr. F.R. Singvi, Managing Director, Sansera India Pvt. Ltd | Member |
| 14. | Director, CMTI Tumkur Road | Member |
| 15. | Nirmala Shapoorkar, Unit Head, Nestle India Ltd., Nanjangud, Mysore District | Member |
| 16. | Mr. Rajendra Hinduja, Gokaldas Exports | Member |
| 17. | Mr. Ajay Nanavati, Chairman 3M Ltd. | Member |
| 18. | Mr. Narandra Pani, NIAS | Member |
| 19. | Mr. Mohandas Pai, Manipal Global | Member |
| 20. | Commissioner for Industrial Development and Director of Industries and Commerce | Member Secretary |

The role and responsibilities of the Task Force is as follows :

The Task Force shall discuss on various issues concerning the manufacturing sector in the State and suggest measures for improving the contribution of manufacturing sector upto 25% from the present level of 16% to the GDP.

The Karnataka Udyoga Mitra, Bangalore will provide Secretarial service to the above committee meetings and proceedings.

The Government Order No. CI 71 SPI 2013, dated : 16-05-2013 stands withdrawn.

By Order and in the name of the Governor of Karnataka,

**SHIVASHANKAR NAIK. L**

Desk Officer (Technical Cell),

Commerce and Industries Department,

**P.R. 689**

## COMMERCE AND INDUSTRIES SECRETARIAT

**SUB :** Designating the Nodal Department, Nodal Agency and Constitution of High Level Co-ordination Committee for Chennai-Bangalore-Chitradurga Industrial Corridor-reg.

**REF :** Letter No. I & C. Vishwa. EO.C. B & BMC 29-2013-14, dated 07-05-2013 from Commissioner for Industrial Development and Director of Industries and Commerce, Bangalore.

**PREAMBLE :**

The Department of Indstrial Policy and Promotion, Ministry of Commerce and Industry, Govt. of India has got prepared a concept paper for development of Perninsular Region Industrial Development Corridor (PRIDE Corridor), for providing a potentially strong transport and Industrial activity amoung the States of Tamil Nadu, Andhra Pradesh, Karnataka and Maharastra. As part of the project, Chennai-Bangalore-Chitradurga Industrial Corridor and Bangalore-Mumbai Industrial Corridor are proposed with the association of Japan and Great Britain respectively.

Review meetings are being organized by DIP, GoI on a regular basis along with JICA and their consultants. All the states representatives involved (Tamil Nadu, Andhra Pradesh and Karnataka) are being invited for the meetings.

Accordingly, a background note is prepared by Commissioner for Industrial Development and Director of Industries and Commerce and has recommended formalizing the representatives from Karnataka State. It is required to designate nodal department, agency and also the nodal officer. Therefore following is for consideration and approval.

1. To designate Commerce and Industries Dept. as the Nodal Dept. and Principal Secretary, C & I Dept., as nodal officer for the project. This is also required to be intimated to DIPP, GoI.
2. To designate Karnataka State Industrial and Infrastructure Development Corporation as the nodal agency for taking forward the Corridor project considering that they have been designated as the nodal agency for the development of NIMZ & SIR.
3. To constitute a High Level Co-ordination Committee chaired by Chief Secretary.

a) Additional Chief Secretary and Development Commissioner
b) Principal Secretary, Commerce and Industries Dept.
c) Principal Secretary, Revenue Dept.
d) Principal Secretary, Infrastructure Development Dept.
e) Principal Secretary, Public Works Dept.
f) Principal Secretary, Urban Development Dept.
g) Principal Secretary, Finance Dept.
h) Principal Secretary, Planning Dept.
i) Principal Secretary, Forest, Ecology and Environment Dept.
j) Principal Secretary, Water Resource Dept.
k) Principal Secretary, Energy Dept.
l) Managing Director, KSIIDC
m) Commissioner for Industrial Development & C & I Dept. Gok.
n) Chairman, KSPCB
o) CEO, KIADB
p) Representative from NHAI
q) Division Railway Manager, Bangalore.

Government has examined the proposal of Commissioner for Industrial Development & Director of Industries and Commerce Department in all aspects and hence the following order.

Government has examined the proposal and hence the following order.

**GOVERNMENT ORDER NO. CI 103 SPI 2013, BANGALORE, DATED : 13-06-2013.**

The Government is pleased to accord approval for the following :-

1. Commerce and Industries Dept. is designated as the Nodal Department and Commissioner for Industrial Development and Director of Industries and Commerce Department, as nodal officer for the project for the Chennai-Bangalore-Chitradurga and Bangalore-Mumbai Industrial Corridor.
2. Karnataka State Industrial and Infrastructure Development Corporation is designated as the nodal agency for taking forward the Industrial Corridor projects.
3. A High Level Co-ordination Committee chaired by Chief Secretary to monitor the progress of the Industrial Corridor projects and review the action taken in this regard.

| | | |
|---|---|---|
| 1. | Additional Chief Secretary and Development Commissioner | Chairman |
| 2. | Principal Secretary, Commerce and Industries Dept. | Member |
| 3. | Principal Secretary, Revenue Dept. | Member |
| 4. | Principal Secretary, Infrastructure Development Dept. | Member |
| 5. | Principal Secretary, Public Works Dept. | Member |

| | | |
|---|---|---|
| 6. | Principal Secretary, Urban Development Dept. | Member |
| 7. | Principal Secretary, Finance Dept. | Member |
| 8. | Principal Secretary, Planning Dept. | Member |
| 9. | Principal Secretary, Forest, Ecology and Environment Dept. | Member |
| 10. | Principal Secretary, Water Resource Dept. | Member |
| 11. | Principal Secretary, Energy Dept. | Member |
| 12. | Managing Director, KSIIDC | Member |
| 13. | Commissioner for Industrial Development & Director of Industries and Commerce Dept. Gok. | Member Secretary |
| 14. | Chairman, KSPCB | Member |
| 15. | CEO &EM KIADB | Member |
| 16. | Representative from NHAI | Member |
| 17. | Division Railway Manager, Bangalore. | Member |

.

By Order and in the name of the Governor of Karnataka,

**SHIVASHANKAR NAIK. L**

Desk Officer (Technical Cell),

Commerce and Industries Department,

**P.R. 690**

## ಕಂದಾಯ ಸಚಿವಾಲಯ

**ವಿಷಯ** : ಬಳ್ಳಾರಿ ಜಿಲ್ಲೆ, ಬಳ್ಳಾರಿ ತಾಲ್ಲೂಕು, ಶಿಂಧಿಗೇರಿ ಗ್ರಾಮದ ಸ.ನಂ. 77 ರಲ್ಲಿ ವಿಸ್ತೀರ್ಣ 47–12 ಎಕರೆ ಜಮೀನನ್ನು ಪರಿಹಾರಾತ್ಮಕ ನೆಡುತೋಪು ಬೆಳೆಸಲು ಶ್ರೀ ಅಲ್ಲಂ ಪ್ರಶಾಂತ್ ಮೈನ್ಸ್, ಬಳ್ಳಾರಿ ಇವರ ಪರವಾಗಿ ಅರಣ್ಯ ಇಲಾಖೆಗೆ ವರ್ಗಾಯಿಸುವ ಬಗ್ಗೆ

**ಓದಲಾಗಿದೆ :** ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರ ಪತ್ರ ಸಂಖ್ಯೆ : ಕಂ.ಭೂಮಿ/19/2012–13, ದಿನಾಂಕ : 18–07–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ ಇವರು ಶ್ರೀ ಅಲ್ಲಂ ಪ್ರಶಾಂತ್ ಮೈನ್ಸ್ ಓನರ್, ಬಳ್ಳಾರಿ ಇವರಿಗೆ ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕು, ಕೆಂಚಿನಹಳ್ಳಿ ಗ್ರಾಮದಲ್ಲಿ 19–70 ಹೆಕ್ಟೇರ್ ಅರಣ್ಯ ಜಮೀನಿನಲ್ಲಿ ಗಣಿ ಗುತ್ತಿಗೆ ಮಂಜೂರಾಗಿದ್ದು, ಸದರಿ ಜಮೀನಿಗೆ ಸಮಾನಾಂತರವಾಗಿ ಪರ್ಯಾಯ ನಡುತೋಪು ಬೆಳೆಸಲು, ಬಳ್ಳಾರಿ ತಾಲ್ಲೂಕು, ಶಿಂಧಿಗೇರಿ ಗ್ರಾಮದ ಸ.ನಂ. 77ರಲ್ಲಿ 47–12 ಎಕರೆ ಜಮೀನನ್ನು ಅರಣ್ಯ ಇಲಾಖೆಗೆ ಬಿಡುಗಡೆ ಮಾಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿ, ಬಳ್ಳಾರಿ ಇವರ ವರದಿಯಂತೆ ಶಿಂಧಿಗೇರಿ ಗ್ರಾಮದ ಸ.ನಂ. 77ರ ಒಟ್ಟು ವಿಸ್ತೀರ್ಣ 95–96 ಎಕರೆ ಇದ್ದು, ಪಹಣಿ ಮೇರೆಗೆ "ಸರ್ಕಾರಿ ಗುಡ್ಡ" ಎಂದು ವರ್ಗೀಕರಣ ಆಗಿರುತ್ತದೆ ಮತ್ತು ಜಮೀನಿನ ಮೇಲೆ ಯಾವುದೇ ಅತಿಕ್ರಮಣ ಇರುವುದಿಲ್ಲ ಮತ್ತು ನೆಡುತೋಪು ಬೆಳೆಸಲು ಅರಣ್ಯ ಇಲಾಖೆಗೆ ವರ್ಗಾವಣೆ ಮಾಡಲು ಸಾರ್ವಜನಿಕರಿಂದ ಯಾವು ಆಕ್ಷೇಪಣೆ ಇರುವುದಿಲ್ಲ. ಅಧಿಸೂಚನೆ ಸಂಖ್ಯೆ : ಆರ್‌ಡಿ/51/ಟಿಜಿಪಿ/81, ದಿನಾಂಕ: 18–08–1981ರಲ್ಲಿ ಪ್ರಕಟಿಸಿರುವ ವಿವರಗಳಂತೆ, ಶಿಂಧಿಗೇರಿ ಗ್ರಾಮದ ಸ.ನಂ. 77 ಲ್ಯಾಂಡ್ ಬ್ಯಾಂಕ್‌ನಲ್ಲಿರುವುದಿಲ್ಲ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 39 ಎಲ್‌ಜಿಇ 2012, ಬೆಂಗಳೂರು, ದಿನಾಂಕ : 13–06–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಶ್ರೀ ಅಲ್ಲಂ ಪ್ರಶಾಂತ್ ಮೈನ್ಸ್ ಓನರ್, ಬಳ್ಳಾರಿ ಇವರಿಗೆ ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕು, ಕೆಂಚಿನಹಳ್ಳಿ ಗ್ರಾಮದಲ್ಲಿ 19–70 ಹೆಕ್ಟೇರ್ ಅರಣ್ಯ ಜಮೀನಿನಲ್ಲಿ ಗಣಿ ಗುತ್ತಿಗೆ ಮಂಜೂರಾಗಿದ್ದು, ಸದರಿ ಜಮೀನಿಗೆ ಸಮಾನಾಂತರವಾಗಿ ಲ್ಯಾಂಡ್‌ಬ್ಯಾಂಕಿನಲ್ಲಿ ಸೇರಿಸಿಕೊಂಡು ಪರ್ಯಾಯ ನಡುತೋಪು ಬೆಳೆಸಲು, ಬಳ್ಳಾರಿ ತಾಲ್ಲೂಕು, ಶಿಂಧಿಗೇರಿ ಗ್ರಾಮದ ಸ.ನಂ. 77ರಲ್ಲಿ 47–12 ಎಕರೆ

ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969) ನಿಯಮ 27ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಸ್ತಾಪಿತ ಜಮೀನನ್ನು ಅರಣ್ಯ ಇಲಾಖೆಗೆ ಹಸ್ತಾಂತರಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಜಿ. ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3).

P.R. 695

SC - 25

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್.ಎಮ್. ಬೆಂಕಿ, ಪಿ.ಎಸ್.ಐ. ಜೇವರ್ಗಿ ಪೊಲೀಸ್ ಠಾಣೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗದಗ ಜಿಲ್ಲೆ, ಗದಗ ಇವರ ಆದೇಶ ಸಂಖ್ಯೆ: ಇವಿ/ನಿಯಮ–7/53/2012 (ಆ.ಪು.ಸಂಖ್ಯೆ:477/2012) ದಿನಾಂಕ : 27.04.2012.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ : ಅಪೀಲು 115/ಉವ/2012, ದಿನಾಂಕ 06–12–2012.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 15–01–2013.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2)74/2012–13, ದಿನಾಂಕ 28–3–2013.

**ಪ್ರಸ್ತಾವನೆ:**

ಶ್ರೀ ಎಸ್.ಎಮ್. ಬೆಂಕಿ, ಪಿ.ಎಸ್.ಐ. ಜೇವರ್ಗಿ ಪೊಲೀಸ್ ಠಾಣೆ, ಇವರು ಈ ಹಿಂದೆ ರೋಣ ಪೊಲೀಸ್ ಠಾಣೆ, ಗದಗ ಜಿಲ್ಲೆಯಲ್ಲಿ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನ, ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

> "ರೋಣ ಠಾಣೆಯ ಗುನ್ನಾ ನಂ. 39/2011, ಕಲಂ. 323, 354, 355,427, 504, 506 ಸಹ ಕಲಂ 34 ಐಪಿಸಿ ಮತ್ತು (1) (X) (XI) (XIV) ಎಸ್‌ಸಿ/ಎಸ್‌ಟಿ ಆ್ಯಕ್ಟ (ಸ್ಪೆಶಲ್ ಎಸ್‌ಸಿ/ಎಸ್‌ಟಿ ಸಿಸಿ ನಂ. 10/2011)ರ ಪ್ರಕರಣದಲ್ಲಿ ವಶಪಡಿಸಿಕೊಂಡ ಸ್ವತ್ತನ್ನು ದಿನಾಂಕ 21–02–2012 ರೊಳಗಾಗಿ ಮಾನ್ಯ ಜಿಲ್ಲಾ ಮತ್ತು ನ್ಯಾಯಾಲಯ ಗದಗ ರವರ ಮುಂದೆ ಹಾಜರುಪಡಿಸುವಂತೆ ಸೂಚಿಸಿದ ನ್ಯಾಯಾಲಯ ಆದೇಶವನ್ನು ದಿನಾಂಕ 09–12–2011 ರಂದು ನೀವು ಸ್ವೀಕರಿಸಕೊಂಡಿದ್ದರೂ ಸಹಿತ ಮುದ್ದತ್ತ ದಿನಾಂಕ ಮೀರಿ ದಿನಾಂಕ 02–03–2012 ರಂದು ಡಿಎಸ್‌ಪಿ ಗದಗ ಉಪ–ವಿಭಾಗ ಗದಗ ರವರ ಕಾರ್ಯಾಲಯಕ್ಕೆ ಪತ್ರ ಬರೆದು ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಿರುತ್ತೀರಿ. ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು ನಿಮ್ಮ ಸೇವೆಯು ಇತರರಿಗೆ ಮಾದರಿಯಾಗುವಂತಿರಬೇಕು. ಆದರೆ ನೀವೇ ನ್ಯಾಯಾಲಯದ ಆದೇಶ ಉಲ್ಲಂಘನೆ ಮಾಡಿ ಮಹತ್ವದ ಪ್ರಕರಣಗಳಲ್ಲಿ ವಶಪಡಿಸಿಕೊಂಡ ಸ್ವತ್ತನ್ನು ನಿಗಧಿತ ಅವಧಿಯೊಳಗೆ ನ್ಯಾಯಾಲಯಕ್ಕೆ ಹಾಜರುಪಡಿಸಲು ವಿಫಲರಾಗಿ ನಿಮ್ಮ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನ, ಬೇಜವಾಬ್ದಾರಿತನ ಪ್ರದರ್ಶಿಸಿ, ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಿದ ಅಪರಾಧ."

ಮೇಲಿನ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗದಗ ಜಿಲ್ಲೆ, ಗದಗ ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 27–04–2012ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಧಕ್ಕೆಯಾಗದಂತೆ ಮೂರು (03) ತಿಂಗಳ ಕಾಲ ಮುಂದೂಡಿ ಆದೇಶಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ 06.12.2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನ, ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 12 ಪೊಸಿಅ 2013, ಬೆಂಗಳೂರು, ದಿನಾಂಕ : 14-06-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎಮ್. ಬೆಂಕಿ, ಪಿ.ಎಸ್.ಐ. ಜೇವರ್ಗಿ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**P.R. 702**

**SC - 30**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಸೇರ್ಪಡೆ ಆದೇಶ

**ಸಂಖ್ಯೆ : ಆಕುಕ 123 ಆರ್‌ಜಿಯು 2013, ಬೆಂಗಳೂರು, ದಿನಾಂಕ 13-06-2013**

ಸರ್ಕಾರದ ಆದೇಶ ಸಂಖ್ಯೆ ಆಕುಕ 123 ಆರ್‌ಜಿಯು 2013, ದಿನಾಂಕ 05-06-2013ರ ಆದೇಶ ಭಾಗದ ನಂತರ "ಮುಂದುವರಿದು, 2013-14ನೇ ಸಾಲಿನ ರಾಜ್ಯ ಕೋಟಾದ ಸ್ನಾತಕೋತ್ತರ ಕೌನ್ಸಿಲಿಂಗ್‌ನಲ್ಲಿ ಸೀಟುಗಳನ್ನು ಪಡೆದಿರುವ ವಿದ್ಯಾರ್ಥಿಗಳು, ಕಾಮೆಡ್-ಕೆ, ಕೆ.ಆರ್.ಎಲ್.ಎಂ.ಪಿ.ಸಿ.ಎ. ಹಾಗೂ ರಾಜ್ಯದ ಇತರ ಡೀಮ್ಡ್ ಸಂಸ್ಥೆಗಳು ನಡೆಸಿರುವ ಪ್ರವೇಶ ಪರೀಕ್ಷೆಯಲ್ಲೂ ಉತ್ತಮ ಶ್ರೇಣಿಯನ್ನು ಪಡೆದಿದ್ದು, ಇನ್ನೂ ಉತ್ತಮ ಸೀಟುಗಳನ್ನು ಪಡೆಯುವ ಅವಕಾಶವಿರುವುದರಿಂದ, ಅಂತಹ ವಿದ್ಯಾರ್ಥಿಗಳು ದಿನಾಂಕ 30-06-2013 ರೊಳಗೆ ಅಥವಾ 2ನೇ ಸುತ್ತಿನ ಕೌನ್ಸಿಲಿಂಗ್ ಪ್ರಾರಂಭವಾಗುವ ಮುಂಚೆ ರಾಜ್ಯ ಕೋಟಾದಡಿ ಪಡೆದಿರುವ ಸ್ನಾತಕೋತ್ತರ ಸೀಟುಗಳನ್ನು ಆದ್ಯರ್ಪಿಸಿದಲ್ಲಿ, ಅಂತಹ ವಿದ್ಯಾರ್ಥಿಗಳಿಗೂ ಸಹ ಕಾಮೆಡ್-ಕೆ, ಕೆ.ಆರ್.ಎಲ್.ಎಂ.ಪಿ.ಸಿ.ಎ. ಹಾಗೂ ರಾಜ್ಯದ ಇತರ ಡೀಮ್ಡ್ ಸಂಸ್ಥೆಗಳು ನಡೆಸುವ ಕೌನ್ಸಿಲಿಂಗ್‌ನಲ್ಲಿ ಭಾಗವಹಿಸಲು ಮೂಲ ದಾಖಲಾತಿಗಳನ್ನು ಹಿಂದಿರುಗಿಸಲು ಸರ್ಕಾರದ ಆದೇಶ ಸಂಖ್ಯೆ : ಆಕುಕ 593 ಎಂಪಿಎಸ್ 2010, ದಿನಾಂಕ 18-01-2011 ರನ್ವಯ ವಿಧಿಸಲಾಗುತ್ತಿದ್ದ ದಂಡದ ಮೊತ್ತವನ್ನು ಮನ್ನಾ ಮಾಡಿ ಆದೇಶಿಸಿದೆ. ಯಾವುದೇ ಕಾರಣಕ್ಕೂ 2ನೇ ಸುತ್ತಿನ ಕೌನ್ಸಿಲಿಂಗ್ ನಂತರ ಸೀಟುಗಳನ್ನು ಆದ್ಯರ್ಪಿಸಿದಲ್ಲಿ ದಂಡವನ್ನು ಪಾವತಿ ಮಾಡತಕ್ಕದ್ದು" ಎಂಬುದನ್ನು 2ನೇ ಕಂಡಿಕೆಯಾಗಿ ಸೇರ್ಪಡಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮೆಹಬೂಬ್ ಖಾನ್,**

ಸರ್ಕಾರದ ಅಧೀನ ಕಾರ್ಯದರ್ಶಿ-2,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

**P.R. 703**

## COMMERCE AND INDUSTRIES SECRETARIAT

**Subject :** Discontinuation of the State High Level Screening Committee for consideration of investment proposals.

**Read :**
1. G.O. No: CI 162 SPI 2001, Dated: 06.08.2001
2. Karnataka (Industries) Facilitation Act, 2002
3. G.O. No: CI 162 SPI 2001, Dated: 21.08.2002.
4. Corrigendum G.O. No: CI 162 SPI 2001, Dated: 23.12.2005.
5. G.O. No: CI 305 SPI 2008, Dated: 27.01.2010

**PREAMBLE :**

In the G.O. read at (1) above, the Government had constituted State High Level Screening Committee for scrutinizing the investment proposals above Rs.50.00 Cr. where The Commissioner for Industrial Development & Director of Industries & Commerce Chaired the Committee. The same committees continued after the enactment of Karnataka (Industries) Facilitation Act, 2002 read at (2) above, with The Commissioner for Industrial Development & Director of Industries & Commerce as Chairman of State High Level Screening Committee in the Government order read at (3) above. In the Corrigendum Government order read at (4) above, Principal Secretary to Govt., Commerce & Industries was made Chairman of State High Level Screening Committee. In the Government order read at (5) above, Hon'ble Minister for Large & Medium Scale Industries was made Chairman of State High Level Screening Committee. The arrangement continued till date, in the earlier Govt. orders.

Now, as Hon'ble Chief Minister is also holding Commerce & Industries Ministry portfolio, the matter was being considered and the following order is issued.

**GOVERNMENT ORDER NO. CI 105 SPI 2013 (2), BANGALORE, DATED 21.06.2013**

In the circumstances explained in the Preamble, Government orders with immediate effect discontinuation of State High Level Screening Committee which was In existence till date, until further orders.

Hence forth Department of Industries & Commerce, shall process all investment proposals with the assistance of Karnataka Udyoga Mitra, obtain all relevant concurrences from respective Departments, assess the actual land requirement of Industry after land audit and place before the State High Level Clearance Committee for consideration.

By Order and in the name of the Governor of Karnataka,

**SHIVASHANKAR NAIK. L,**

Desk Officer (Technical Cell),

Commerce & Industries Department.

**P.R. 704**

**SC - 100**

## COMMERCE AND INDUSTRIES SECRETARIAT

**Subject :** Constitution of the State Level Single Window Committee for consideration of investment proposals.

**Read :**
1. G.o, No: CI 162 SPI 2001, Dated: 06.08.2001.
2. Karnataka (Industries) Facilitation Act, 2002.
3. G.O. No: CI 162 SPI 2001, Dated: 21.08.2002.
4. G.O. No: CI 162 SPI 2001, Dated: 26.07.2004.
5. G.O. No: CI 305 SPI 2008, Dated: 17.10.2008.

**PREAMBLE :**

In the Government order read at (1) above, the Government had constituted State Level Single Window Clearance Committee and the list of members were notified, where Principal Secretary to Govt., Commerce & Industries was nominated as Chairman of the State Level Single Window Clearance Committee (SLSWCC). The same committees continued after the enactment of Karnataka (Industries) Facilitation Act, 2002 read at (2) above, where Chief Secretary to Government, was nominated as Chairman of SLSWCC in the Government order read at (3) above. In the Government order read (4) above, Principal Secretary to Government, Commerce & Industries was re-nominated as Chairman of the State Level Single Window Clearance Committee. In the Government order read at (5) above, Hon'ble Minister for Large & Medium Scale Industries was nominated as Chairman of SLSWCC. The arrangement continued till date, in the earlier Govt. orders.

Now, as Hon'ble Chief Minister is also holding Commerce & Industries Ministry portfolio, further orders were sought from Hon'ble Chief Minister in this regard. Hon'ble Chief Minister has directed to reconstitute the SLSWCC with Chief Secretary to Govt., as the Chairman. Hence this order.

### GOVERNMENT ORDER NO. CI 105 SPI 2013 (1), BANGALORE, DATED 21.06.2013

In the circumstances explained in the Preamble, Government is pleased to constitute the State Level Single Window Clearance Committee as follows:

| | | |
|---|---|---|
| 1 | The Chief Secretary to Government of Karnataka | Chairman |
| 2 | The Commissioner for Industrial Development & Director of Industries and Commerce | Member |
| 3 | The CEO & EM, KIADB | Member |
| 4 | The Director of IT & BT Dept | Member |
| 5 | The Director of Kannada & Culture Dept. | Member |
| 6 | The Director of Tourism | Member |
| 7 | The Joint Secretary / Dy. Secretary, Urban Development Dept. | Member |
| 8 | The Deputy Secretary to Govt., Revenue Dept. | Member |
| 9 | The Director (IPP Ceil), Infrastructure Dept. | Member |
| 10 | The MD, KSIIDC | Member |
| 11 | The MD, KPTCL | Member |
| 12 | The Managing Director, KSFC | Member |
| 13 | The Chairman, Karnataka State Pollution Control Board | Member |
| 14 | The Commissioner for Commercial Taxes | Member |
| 15 | The Chief Inspector of Factories & Boilers | Member |
| 16 | The Director, Technical Ceil, Commerce & Industries Dept. | Member |
| 17 | The Joint Director (ID), Industries & Commerce Dept. | Member |
| 18 | The Managing Director, Karnataka Udyog Mitra | Member Secretary |

The Chairman of the Committee may co-opt/invite any other officer/head of statutory organization as additional members as and when required.

By Order and in the name of the Governor of Karnataka,

**SHIVASHANKAR NAIK. L,**

Desk Officer (Technical Cell),

Commerce & Industries Department.

**P.R. 705**

**SC - 100**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ನಾಯಂಡಹಳ್ಳಿ ಬಳಿ ಹೊರವರ್ತುಲ ರಸ್ತೆ ಮತ್ತು ಬೆಂಗಳೂರು–ಮೈಸೂರು ರಸ್ತೆಯ ಜಂಕ್ಷನ್‌ನಲ್ಲಿ ನಿರ್ಮಿಸಲಾಗುತ್ತಿರುವ ಗ್ರೇಡ್ ಸೆಪರೇಟರ್‌ಗೆ ಸಂಬಂಧಿಸಿದ ಭೂಸ್ವಾಧೀನ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡಲು ಮತ್ತು ಅಂತಿಮ ಅಧಿಸೂಚನೆ ಹೊರಡಿಸಲು ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂಖ್ಯೆ: ಬೆಂಅಪ್ರಾ/ಭೂಸ್ವಾಅ/533/11–12 ದಿನಾಂಕ 09.09.2011, ಬೆಂಅಪ್ರಾ/ ಭೂಸ್ವಾಅ/725/2011–12 ದಿನಾಂಕ 16.11.2011, ಬೆಂಅಪ್ರಾ/ಆಯುಕ್ತರು/ ಅಭಿಯಂತರರ ಸದಸ್ಯರು/ಅ.ಅ–1/ಟಿ–518/2011–12 ದಿನಾಂಕ 29.12.2011, ಬೆಂಅಪ್ರಾ/ಆಯುಕ್ತರು/ಅಭಿಯಂತರರ ಸದಸ್ಯರು/ಅ.ಅ–1/ಟಿ–602/2011–12 ದಿನಾಂಕ 16.02.2011, ಬೆಂಅಪ್ರಾ/ಆಯುಕ್ತರು/ಅಭಿಯಂತರರ ಸದಸ್ಯರು/ ಅ.ಅ–1/ಟಿ–27/2012–13 ದಿನಾಂಕ 20.04.2012, ಮತ್ತು ಬೆಂಅಪ್ರಾ/ ಆಯುಕ್ತರು/ಆಸ/ಟಿ–154/2012–13 ದಿನಾಂಕ 27.06.2012.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಪತ್ರಗಳಲ್ಲಿ ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರು ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿಯ ದೀವಿಟಿಗೆ ರಾಮನಹಳ್ಳಿ, ನಾಯಂಡಹಳ್ಳಿ ಮತ್ತು ಪಂತರಪಾಳ್ಯ ಗ್ರಾಮಗಳ 3 ಎಕರೆ 21.75 ಗುಂಟೆ ಜಮೀನನ್ನು ನಾಯಂಡಹಳ್ಳಿ ಬಳಿ ಹೊರವರ್ತುಲ ರಸ್ತೆ ಮತ್ತು ಬೆಂಗಳೂರು–ಮೈಸೂರು ರಸ್ತೆಯ ಜಂಕ್ಷನ್‌ನಲ್ಲಿ ನಿರ್ಮಿಸಲಾಗುತ್ತಿರುವ ಎರಡು ಮಟ್ಟದ ಗ್ರೇಡ್ ಸಪರೇಟರ್ ಮತ್ತು ಜಂಕ್ಷನ್ ಅಭಿವೃದ್ಧಿ ಕಾಮಗಾರಿ ನಿರ್ಮಿಸುವ ಸಂಬಂಧ ಬೇಕಾಗುವ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲು ತೀರ್ಮಾನಿಸಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವಿಷಯ ಸಂಖ್ಯೆ: 39/11 ದಿನಾಂಕ: 15.02.2011 ರ ನಿರ್ಣಯದಂತೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಕಾಯ್ದೆ ಕಲಂ 17(1) ಹಾಗೂ (3)ರ ಪ್ರಕಾರ ಪ್ರಾರಂಭಿಕ ಅಧಿಸೂಚನೆಯನ್ನು ಸಂಖ್ಯೆ: ಬೆಂಅಪ್ರಾ/ಭೂಸ್ವಾಅ/655/2010–11, ದಿನಾಂಕ: 03.03.2011 ರಲ್ಲಿ ಹೊರಡಿಸಲಾಗಿದೆ. ಈ ಅಧಿಸೂಚನೆಯನ್ನು ದಿನಾಂಕ: 24.03.2011ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ. ಈ ಜಮೀನುಗಳ ಭೂಸ್ವಾಧೀನಕ್ಕಾಗಿ ತಗಲುವ ವೆಚ್ಚವನ್ನು ಪ್ರಾಧಿಕಾರವು ಭರಿಸಲು ತೀರ್ಮಾನಿಸಲಾಗಿದೆಯೆಂದು ತಿಳಿಸಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಕಾಯ್ದೆ ಕಲಂ 18(3)ರನ್ವಯ ರೂ. 5,85,90,159/– ಅಂದಾಜು ಮೊತ್ತದ ಭೂಸ್ವಾಧೀನ ಯೋಜನೆಗೆ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಈ ಯೋಜನೆಗೆ ಬೇಕಾಗಿರುವ ದೀವಿಟಿಗೆರಾಮನಹಳ್ಳಿ ಗ್ರಾಮದ 24.5 ಗುಂಟೆ, ನಾಯಂಡಹಳ್ಳಿ ಗ್ರಾಮದ 16.5 ಗುಂಟೆ ಹಾಗೂ ಪಂತರಪಾಳ್ಯ ಗ್ರಾಮದ 2 ಎಕರೆ 20.75 ಗುಂಟೆ ಸೇರಿದಂತೆ ಒಟ್ಟಾರೆ 3 ಎಕರೆ 21.75 ಗುಂಟೆ ಜಮಿನನ್ನು ಭೂಸ್ವಾಧೀನಪಡಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಕಾಯ್ದೆ ಕಲಂ 18(3) ರನ್ವಯ ಈ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿ ಸದರಿ ಕಾಯ್ದೆ ಕಲಂ 19(1) ರನ್ವಯ ಅಂತಿಮ ಅಧಿಸೂಚನೆ ಹೊರಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಸರ್ಕಾರ ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 366 ಬೆಂಅಸೇ 2011, ಬೆಂಗಳೂರು, ದಿನಾಂಕ: 04–06–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ನಾಯಂಡಹಳ್ಳಿ ಬಳಿ ಹೊರವರ್ತುಲ ರಸ್ತೆ ಮತ್ತು ಬೆಂಗಳೂರು-ಮೈಸೂರು ರಸ್ತೆಯ ಜಂಕ್ಷನ್‌ನಲ್ಲಿ ನಿರ್ಮಿಸಲಾಗುತ್ತಿರುವ ಎರಡು ಮಟ್ಟದ ಗ್ರೇಡ್ ಸಪರೇಟರ್ ನಿರ್ಮಿಸುವ ಸಂಬಂಧ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿಯ ದೀವಿಟಿಗೆ ರಾಮನಹಳ್ಳಿ ಗ್ರಾಮದ 24.5 ಗುಂಟೆ, ನಾಯಂಡಹಳ್ಳಿ ಗ್ರಾಮದ 16.5 ಗುಂಟೆ ಹಾಗೂ ಪಂತರಪಾಳ್ಯ ಗ್ರಾಮದ 2 ಎಕರೆ 20.75 ಗುಂಟೆ ಸೇರಿದಂತೆ ಒಟ್ಟಾರೆ 3 ಎಕರೆ 21.75 ಗುಂಟೆ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳುವ ಯೋಜನೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಕಾಯ್ದೆ ಕಲಂ 18(3) ರನ್ವಯ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಿದೆ.

ಹಾಗೂ ಸದರಿ ಯೋಜನೆಗೆ ತಗಲುವ ಅಂದಾಜು ರೂ. 5,85,90,159/– (ಐದು ಕೋಟಿ ಎಂಭತ್ತೈದು ಲಕ್ಷದ ತೊಂಭತ್ತು ಸಾವಿರದ ಒಂದು ನೂರ ಐವತ್ತೊಂಭತ್ತು ರೂಪಾಯಿಗಳು ಮಾತ್ರ) ಗಳ ವೆಚ್ಚವನ್ನು ಪ್ರಾಧಿಕಾರದ ಸಂಪನ್ಮೂಲಗಳಿಂದಲೇ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಚಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ.

**PR. 691**

**SC - 700**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು